KANNADA

# OMPOSITION

---

ಕನ್ನಡ

# ಲೇಖನ ಲಕ್ಷಣ

ಕನ್ನಡ ಬರವಣಿಗೆಯ ಕ್ರಮವನ್ನು
ಬೋಧಿಸತಕ್ಕದ್ದು.



---

BANGALORE CITY
GURUVILAS PRINTING WORKS
1922



0-2-0 PRICE 0-7-0

KANNADA

# COMPOSITION

---

ಕನ್ನಡ

# ಲೇಖನಲಕ್ಷಣ

ಕನ್ನಡ ಬರವಣಿಗೆಯ ಕ್ರಮವನ್ನು
ಬೋಧಿಸತಕ್ಕದ್ದು



th
t
ry
e l
mp
ted
d i
ritt
ct supe
tor of Public I
Srikantaiya M.
sity and Assist

BANGALORE CITY
GURUVILAS PRINTING WORKS
1922

# PREFACE

A treatise on Composition in Kannada suited to the requirements of the young pupils in public schools has been a long-felt want. This is a poor attempt to supply an Elementary Guide to the Rules of Composition, undertaken at the kind suggestion of Rao Bahadur M. Shama Rao Esq, M. A., Inspector General of Education in Mysore. As the Rules of Syntax are generally neglected in our existing Grammars in Kannada, some pages are devoted to this branch of the subject.

In the light of the examples given under different headings throughout the book, a fairly intelligent School Master may easily guide the students.

Under the present condition of prose literature in Kannada, it is not possible to find copious examples to illustrate each and every rule of Composition. Hence exercises for class use have been omitted and the masters are requested to select examples from other books of their own choice. I have adopted throughout this book the Grammatical terms as used in modern Kannada Vagvidhayini, a book so carefully written by the late Mr. Ramaswami Sastry under the direct supervision of Mr. B. L. Rice C. I. E., late Director of Public Instruction in Mysore. I thank Messrs B. M. Srikantaiya M. A., B. L., Examiner for the Madras University and Assistant Professor of English, Maharaja's College,

Mysore; also Mr. M. Ramaswamayya, B. A., District Inspector of Schools; and Pandith Doddabele Narayana Sastry of Bangalore, for having read the MS., or for having heard it read to them, and also for some of their valuable suggestions.

I request the learned public to pardon me firstly, for my presumption in writing on so learned a subject, and secondly, for the faults which might consciously or unconsciously have crept into the book.

BANGALORE,
*1st June 1915.*

THE AUTHOR.

---

## PREFACE TO THE SECOND EDITION.

---

This Edition contains some additional matter. Two Chapters one on errors in words, in construction, and in meaning, and the other on RASA (poetic sentiments nine in number) have been inserted. The book is thoroughly revised and made simpler.

July 1, 1918. M. S. P.

---

## PREFACE TO THE THIRD EDITION.

---

The book is thoroughly revised and reprinted.

July 3, 1922. M. S. P.

# ಪೀಠಿಕೆ.

---

ಕನ್ನಡ ಭಾಷೆಯಲ್ಲಿ ಕ್ರಮವಾದ ಲೇಖನ ಲಕ್ಷಣವನ್ನು ಬೋಧಿಸುವ ಗ್ರಂಥ ವಿಶೇಷವಾಗಿ ಇರುವುದಿಲ್ಲ. ಇಂಥಾ ಒಂದು ಪುಸ್ತಕ ವಿಲ್ಲದಿರುವಾಗ ಪಾಠಶಾಲೆಗಳಲ್ಲಿ ಉಪಾಧ್ಯಾಯರು ವಾಕ್ಯರಚನೆ ಎಂತಲೂ ಪ್ರಬಂಧರಚನೆ ಎಂತಲೂ ಹೆಸರಿಟ್ಟು ಬಾಲಕರಿಗೆ ಪ್ರಶ್ನೆಗಳನ್ನು ಕೊಡುವುದೂ, ಹುಡುಗರು ಅದಕ್ಕೆ ಸರಿಯಾದ ಉತ್ತರವನ್ನು ಬರೆಯುವುದೂ, ಎರಡೂ ಕಷ್ಟ. ಸಂಸ್ಕೃತದಲ್ಲಿ ಅನೇಕ ಲಕ್ಷಣ ಗ್ರಂಥಗಳಿವೆ. ಬಾಲಕರಿಗೆ ಅದು ಉಪಯೋಗಿಸುವುದಿಲ್ಲ. ಆದ್ದರಿಂದ ಹುಡುಗರಿಗೆ ತಕ್ಕಹಾಗೆ ಒಂದು ಪುಸ್ತಕವನ್ನು ಬರೆ ಎಂದು ವಿದ್ಯಾಭ್ಯಾಸದ ಇಲಾಖಾ ಇ॥ ಜ॥ ರಾವ್‌ಬಹಾದೂರ್. ಮ. ಶಾಮರಾವ್ ಎಂ. ಎ. ಯವರು ನನಗೆ ಸೂಚಿಸಿದರು. ನಮ್ಮ ಮಿತ್ರರಾದ ದೊಡ್ಡಬಳ್ಳಾ ಪುರದ ಸ್ಕೂಲ್ ಹೆಡ್‌ಮಾಸ್ಟರು ಮ॥ ರಾ॥ ಕೊಂಗಾಡಿಯಪ್ಪ ನವರೂ ಸಹಾ ಇದನ್ನು ನನಗೆ ಸೂಚಿಸಿದರು. ಇದರಿಂದ ಉಬ್ಬಿ ನನ್ನ ಯೋಗ್ಯತೆಗೆ ಮೀರಿದ ಈ ಕೆಲಸಕ್ಕೆ ನಾನು ಯತ್ನಮಾಡಿದೆ.

ಕನ್ನಡ ವ್ಯಾಕರಣಗಳಲ್ಲೆಲ್ಲಾ ವಾಕ್ಯ ಲಕ್ಷಣವು ಕೇವಲ ಹ್ರಸ್ವವಾಗಿದೆ. ಆದ್ದರಿಂದ ಈ ವಿಷಯದಲ್ಲಿ ಮೊದಲು ಕೆಲವು ಸೂತ್ರಗಳನ್ನು ಬರೆದಿದೇನೆ. ತರುವಾಯ ಲೇಖನ ಲಕ್ಷಣವನ್ನು ಬಾಲಕರ ಉಪಯೋಗದ ಮಟ್ಟಿಗೆ ಆನುಪೂರ್ವಿಯಾಗಿ ಬರೆಯಲು ಯತ್ನಿಸಿದೇನೆ. ಕಾವ್ಯಲಕ್ಷಣ, ರಸಪ್ರಕರಣ, ಛಂದಶ್ಶಾಸ್ತ್ರ ಮೊದಲಾದ್ದೆಲ್ಲಾ ಉದ್ಗ್ರಂಥ ವಿಚಾರವಾದ್ದರಿಂದ ಇಲ್ಲಿ ಬರೆದಿಲ್ಲ.

ಆಯಾ ಸೂತ್ರಗಳ ಕೆಳಗೆ ಕೊಟ್ಟಿರುವ ಉದಾಹರಣೆಗಳಿಂದ ಬುದ್ಧಿಶಾಲಿಯಾದ ಉಪಾಧ್ಯಾಯನು ವಿದ್ಯಾರ್ಥಿಗಳಿಗೆ ಮಾರ್ಗದರ್ಶಿಯಾಗಿರಬಹುದು. ಕನ್ನಡದ ವಾಕ್ಯ ಗ್ರಂಥಗಳ ಸ್ಥಿತಿಯಿಂದ ಲಕ್ಷಣಗ್ರಂಥಗಳ ಪ್ರತಿಸೂತ್ರಕ್ಕೂ ಉದಾಹರಣೆಯನ್ನು ತೆಗೆದು ಒದಗಿಸುವುದು ಸಾಧ್ಯವಿಲ್ಲ. ಆದಕಾರಣ ವಿದ್ಯಾರ್ಥಿಗಳ ಅಭ್ಯಾಸಕ್ಕಾಗಿ ಉದಾಹರಣೆಗಳನ್ನು ಬರೆಯದೇ ಬಿಟ್ಟಿದೇನೆ. ತಾವು ಓದಿದ ಪುಸ್ತಕಗಳಿಂದ ಉಪಾಧ್ಯಾಯರು ಬಾಲಕರಿಗೆ ಉದಾಹರಣೆಗಳನ್ನು ತೆಗೆದು ತೋರಿಸಬಹುದು. ವ್ಯಾಕರಣ ಮರ್ಯಾದೆಯ ವಿಚಾರದಲ್ಲಿ ಮೈಸೂರು ವಾಗ್ವಿಧಾಯಿನಿಯನ್ನು ಅನುಸರಿಸಿದೇನೆ. ಈ ಪುಸ್ತಕವನ್ನು ಓದಿ ಅಥವಾ ಓದಿಸಿ ಕೇಳಿ ಕೆಲವು ಸಂಗತಿಗಳನ್ನು ಸೂಚಿಸಿದ್ದಕ್ಕಾಗಿ ಮೈಸೂರು ಮಹಾರಾಜರ ಕಾಲೇಜು ಪ್ರೊ॥ ಶ್ರೀಕಂಠಯ್ಯನವರು ಎಂ. ಎ., ಬಿ. ಎಲ್., ವಿದ್ಯಾಭ್ಯಾಸದ ಇ॥ ಇ॥ ಜನರಲ್‌ರವರ ಆಫೀಸು ಅಸಿಸ್ಟೆಂಟರು ಮ॥ ರಾ॥ ರಾಮಸ್ವಾಮಯ್ಯ ಬಿ. ಎ., ವೇ॥ ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳು, ಇವರುಗಳಿಗೆ ನಾನು ಕೃತಜ್ಞನಾಗಿದೇನೆ. ಜ್ಞಾತಾಜ್ಞಾತವಾದ ನನ್ನ ದೋಷಗಳು ಏನಿದ್ದಾಗ್ಯೂ ಕ್ಷಮಿಸಬೇಕು.

ಈ ಪುಸ್ತಕವನ್ನು ಓದುವುದರಿಂದ ವಿದ್ಯಾರ್ಥಿಗಳಿಗೆ ತಿಳವಳಿಕೆ ಹೆಚ್ಚಾದರೆ ನನ್ನ ಶ್ರಮ ಸಾರ್ಥಕವಾಯಿತೆಂದು ನಾನು ಭಾವಿಸುತೇನೆ. ವಿದ್ಯಾರ್ಥಿಗಳು ಈ ಕೆಳಗೆ ಸೂಚಿಸಿರುವ ಸಂಗತಿಗಳನ್ನು ಮಾತ್ರ ಮನಸ್ಸಿಗೆ ತರಬೇಕು.

೧ ಸುಲಭವಾದ ವಾಕ್ಯಗಳನ್ನು ಬರೆಯಬೇಕು.

೨ ತಮಗೆ ಅರ್ಥ ಚೆನ್ನಾಗಿ ತಿಳಿದಿರುವ ಶಬ್ದಗಳನ್ನು ಬರೆಯಬೇಕು.

೩ ಶಬ್ದಾಡಂಬರ, ವಾಕ್ಯಾಡಂಬರ, ಅರ್ಥಾಡಂಬರಗಳಿಗೆ ಹೋಗಬಾರದು.

೪ ಬರೆಯುವ ವಿಷಯದ ಸ್ವಭಾವದಿಂದ ಸಂದರ್ಭಾನುಸಾರವಾಗಿ ಗಂಭೀರವಾದ ಭಾಷೆಯು ತಾನಾಗಿ ಬರುವುದು.

ಬೆಂಗಳೂರು, ಗ್ರಂಥಕರ್ತ.
ರಾಕ್ಷಸ ಸಂ|| ನಿಜ ವೈಶಾಖ ಶು||

---

## ಎರಡನೇ ಮುದ್ರಣದ ಪೀಠಿಕೆ.

---

ಈ ಮುದ್ರಣದಲ್ಲಿ ಶಬ್ದದೋಷ, ವಾಕ್ಯದೋಷ, ಅರ್ಥದೋಷ, ಎಂಬ ಒಂದು ಅಧ್ಯಾಯವನ್ನೂ, ರಸ ಪ್ರಕರಣದ ಮೇಲೆ ಒಂದು ಅಧ್ಯಾಯವನ್ನೂ ಹೆಚ್ಚಾಗಿ ಸೇರಿಸಿದೆ. ಕಷ್ಟವಾಗಿದ್ದ ಕಡೆ ಸುಲಭವಾಗಿ ಬದಲಾಯಿಸಿದೆ.

ಕಾಳಯುಕ್ತಿ ಸಂವತ್ಸರ
ವೈಶಾಖ ಬ|| ಪು.

---

## ಮೂರನೇ ಮುದ್ರಣದ ಪೀಠಿಕೆ.

---

ಪುಸ್ತಕವನ್ನು ಪುನರಾವಲೋಕನಮಾಡಿ ಸರಿಮಾಡಿದೆ.

ದುಂದುಭಿ ಸಂವತ್ಸರ
ಆಷಾಢ ಶು|| ೧೦ ಪು.
ಸೋಮವಾರ.

# CONTENTS

## PART I.

## Rules of Syntax.

### CHAPTER 1—*Subjects.*



### CHAPTER 2—*Pronouns.*



### CHAPTER 3—*Verbs.*



## PART II—*Sentences.*

PAGE.

## PART III

### CHAPTER 1—*Paragraph.*



## PART IV.

### *Kinds of Writing.*

### CHAPTER 1.



## PART V

### CHAPTER 1—*Style*



### CHAPTER 2—*Accuracy.*



### CHAPTER 3—*Simplicity*

# ಲೇಖನಲಕ್ಷಣ

## ೧ನೇ ಭಾಗ.

## ವಾಕ್ಯಲಕ್ಷಣ.

---

## ೧ನೇ ಅಧ್ಯಾಯ.

## ಕರ್ತೃಪದದ ವಿಚಾರ.

ವಿಧಿ ೧. ಒಂದು ವಾಕ್ಯದಲ್ಲಿ ಕರ್ತೃಪದದ ವಚನ, ಲಿಂಗ, ಪುರುಷ, ಇವುಗಳು ಅದರ ಕ್ರಿಯಾಪದಕ್ಕೂ ಬರುವವು.

ಉದಾಹರಣೆ — ಸತ್ಯವು ಲೋಕವನ್ನು ಕಾಪಾಡುವುದು.

ವಿಚಾರ— 1 ನಾಮವಾಚಕ, 2 ಸರ್ವನಾಮ, 3 ಗುಣವಾಚಕ, 4 ಕೃನ್ನಾಮ, 5 ಕ್ರಿಯಾನಾಮ, 6 ವಚನ, * ವಾಕ್ಯ— ಇವುಗಳೆಲ್ಲಾ ಕರ್ತೃಪದವಾಗುವವು.

ಉದಾ— 1. ನಾಮವಾಚಕಕ್ಕೆ–ಧೀರರು ಸ್ವಪ್ರಯೋಜನಕ್ಕೆ ಗಮನಕೊಡರು.

2. ಸರ್ವನಾಮ—ನಾನು ಬುದ್ಧೀ ಹೇಳುತೇನೆ.

3. ಗುಣವಾಚಕ—ಕರಿದು ಬಿಳಿದಾಗದು.

---

* ವಚನವೆಂದರೆ (Phrase) ಕ್ರಿಯಾಪದವಿಲ್ಲದೆ ನಾಮವಾಚಕ ಮೊದಲಾದವುಗಳಿಂದ ಕೂಡಿದ ಕೆಲವು ಶಬ್ದಗಳು ಸಮೂಹವಾಗಿ ಸೇರಿ ಸಾಧಾರಣವಾಗಿ ಅರ್ಥವನ್ನು ಕೊಡತಕ್ಕದ್ದು.

4. ಕೃನ್ನಾಮ—ತಾಳಿದವನು ಬಾಳಿಯಾನು.
5. ಕ್ರಿಯಾನಾಮ — ಆಡೋಣವು ಮಕ್ಕಳಿಗೆ ಆರೋಗ್ಯವನ್ನುಂಟುಮಾಡುವುದು.
6. ವಚನ—ಬೆಂಗಳೂರಿಂದ ಮೈಸೂರಿಗೆ ಏಳು ಗಾವದವಿದೆ.
7. ವಾಕ್ಯ — ಇಂಗ್ಲಿಷರು ಹಿಂದುಸ್ಥಾನವನ್ನೆಲ್ಲಾ ಜೈಸಿಕೊಂಡದ್ದು ಜನರ ಐಕಮತ್ಯವನ್ನು ಹೆಚ್ಚಿಸಿತು.

ವಿಧಿ ೨. ಕರ್ತೃವನ್ನು ವಿವರಿಸುವ ಪ್ರತಿಕರ್ತೃಗಳು ಅಥವಾ ಉಪಕರ್ತೃಗಳು ಕರ್ತೃವಿನ ವಚನ, ಲಿಂಗ, ಪುರುಷಗಳನ್ನೇ ಹೊಂದುವವು.

ನಾಮಪದ ಉಪಕರ್ತೃವಿಗೆ:

ಉ—ಲೋಕನಾಥ, ಜಗದ್ಗುರು, ನಮ್ಮನ್ನು ಕಾಪಾಡುತಾನೆ.

ಸರ್ವನಾಮ ಉಪಕರ್ತೃವಿಗೆ:

ಉ—ಕರ್ಣ, ಅವನು ಸಾಧಾರಣನಲ್ಲ.

ವಿಧಿ ೩. ಪ್ರಧಾನಕರ್ತೃವಿನ ವಿಭಕ್ತಿಯು ಉಪಕರ್ತೃಗಳಿಗೂ ಬರುವುದು.

ಉ—ಋಷಿಗಳು, ಮಹಾತ್ಮರು, ಸರ್ವಜ್ಞರಾಗಿದಾರೆ.

ಉಪಕರ್ತೃವಿನ ವಚನ, ಲಿಂಗ, ಭಿನ್ನವಾಗಿರಬಹುದು.

ಉ—ಹುಡುಗರು, ಈಗೂಳಯು, ಮೊದಲು ಅನ್ನವನ್ನು ತಿನ್ನಲಿ.

ವಿಧಿ ೪. (1) ಬಹು ಕರ್ತೃಗಳು ಬಂದಾಗ ಏಕಾರ್ಥವನ್ನು ಬೋಧಿಸಿದರೆ ಕ್ರಿಯಾಪದವು ಏಕವಚನದಲ್ಲಿಯೇ ಇರಬೇಕು.

ಉ—ಗೋವನ್ನು ಸಂರಕ್ಷಣೇ ಮಾಡಿದರೆ ಹಾಲು, ಮೊಸರು, ಬೆಣ್ಣೆ, ಸಮೃದ್ಧಿಯಾಗಿರುವುದು.

(2) ಸಮೂಹದಲ್ಲಿ ಏಕಾರ್ಥವನ್ನು ಹೇಳುವಾಗಲೂ ಇದೇ ವಿಧಿ.

ಉ—ದಂಡು, ದಾಳಿ, ಗುನಗು, ಬಜಾರ ಬಂದು ಸೇರಿತು.

ವಿಚಾರ—(1) (2) ರಲ್ಲಿ ಕಡೇ ಕರ್ತೃವಿನಾಚೆ 'ಎಲ್ಲಾ' 'ಇದೆಲ್ಲಾ' ಎಂಬುದನ್ನು ಸೇರಿಸುವುದರಿಂದ ಅರ್ಥ ವಿಶದವಾಗುವುದು. ಇದರ ಕ್ರಿಯೆ ಏಕವಚನದಲ್ಲಿರಬಹುದು.

(3) ಸಂಖ್ಯಾವಾಚಕದಲ್ಲಿ ಒಟ್ಟುಮೊತ್ತವನ್ನು ಹೇಳುವಾಗಲೂ ಇದೇ ವಿಧಿ,

ಉ—ಅವನಲ್ಲಿ ಹತ್ತುಸಾವಿರ ರೂಪಾಯಿ ಇದೆ.

ವಿಚಾರ—ಬೇರೆ ಬೇರೇ ನಾಣ್ಯಗಳನ್ನು ಹೇಳುವಾಗಮಾತ್ರ ೧ನೇ ವಿಧಿಗೆ ಅನುಸಾರವಾಗಿ ಕರ್ತೃವಿನ ಬಹುವಚನವು ಕ್ರಿಯೆಗೆ ಇರಲೇಬೇಕು.

ಉ—ಐದು ರೂಪಾಯಿ, ಐದು ಅರ್ಧ ರೂಪಾಯಿ, ನಾಲ್ಕು ಪಾವಲಿ, ಇವೆ.

(4) ಒಂದನ್ನು ಬಿಟ್ಟು ಒಂದು ಇರುವುದರಿಂದ ಉಪಯೋಗವಿಲ್ಲದಿದ್ದರೆ ಇದೇ ವಿಧಿ.

ಉ—ಎತ್ತುಗಾಡಿ ಬಂತು.

(5) ಗೌರವಾರ್ಥದಲ್ಲಿ ಕೆಲವು ಕಡೆ ಏಕವಚನದ ನಾಮವಾಚಕಕ್ಕೆ ಬಹುವಚನದ ಕ್ರಿಯೆ ಬರುವುದು.

ಉ—ದೊರೆ ಅಪ್ಪಣೇ ಕೊಡಿಸಿದರು.

(6) ಏಕವಚನದ ಬಹು ಕರ್ತೃಗಳು ಒಂದನ್ನೊಂದು ವಿವರಿಸುವಾಗ ಕ್ರಿಯೆಗೆ ಏಕವಚನವೇ ಬರುವುದು.

(7) ಕರ್ತೃವು ಒಂದು ವಚನವಾಗಿ ಅಥವಾ ಒಂದು ವಾಕ್ಯವಾಗಿ ಇದ್ದರೆ, ಕ್ರಿಯಾಪದಕ್ಕೆ ಏಕ ವಚನವೇ ಬರುವುದು.

ಉ—1. ಆಕಾಶದ ಸಿಡಿಲ ಬೆಂಕಿಯು ಮರವನ್ನು ಸುಟ್ಟಿತು.

2. ಈ ಜನ್ಮದಲ್ಲಿ ದೀನರಿಗೆ ಕೊಡುವುದು ಮುಂದಿನ ಜನ್ಮಕ್ಕೆ ನಮಗೆ ಗಂಟಾಗುವುದು.

(8) ದೇವರು ಎಂಬ ಕರ್ತೃವಿಗೆ ಕ್ರಿಯೆ ಏಕ ವಚನದಲ್ಲಿಯೇ ಬರುವುದು.

ಉ—ದೇವರು ಲೋಕಕ್ಕೆಲ್ಲಾ ರಕ್ಷಕನಾಗಿದಾನೆ.

ವಿಧಿ ೫. ಅನೇಕ ಕರ್ತೃಗಳನ್ನು ಸೇರಿಸಿ ಒಂದೊಂದರ ಹೆಚ್ಚು ತನವನ್ನೂ ಖ್ಯಾತಿಯನ್ನೂ ತೋರಿಸುವುದಕ್ಕಾಗಿ ಪ್ರತಿ ಕರ್ತೃವಿನ ಮೊದಲಲ್ಲಿ "ಯಾವ" ಎಂಬುದನ್ನೂ ಕೊನೆಯಲ್ಲಿ "ಓ" "ಏನು" ಎಂಬುದನ್ನೂ ಸೇರಿಸುವುದುಂಟು. ಆದರೆ ಇಂಥಾ ಸಂದರ್ಭದಲ್ಲಿ ಕಡೇ ಕರ್ತೃವಿನ ಆಚೆ "ಎಲ್ಲಾ" "ಇವರೆಲ್ಲಾ" "ಇವೆಲ್ಲಾ," ಸಮಷ್ಟಿಯಲ್ಲಿ "ಇದೆಲ್ಲಾ" ಎಂಬ ಶಬ್ದಗಳನ್ನು ಸೇರಿಸಿ ಅರ್ಥ ವನ್ನು ವಿಶದ ಮಾಡುವುದುಂಟು.

ಉ—1. ಯಾವ ಅಂಗದ, ಯಾವನಳ, ಯಾವನೀಲ, ಯಾವ ಜಾಂಬವಂತ, ಯಾವ ಹನುಮಂತ, ಇವರೆಲ್ಲಾ ಹೊರಟರು.

2. ಭೀಷ್ಮಾಚಾರ್ಯನೋ, ದ್ರೋಣಾಚಾರ್ಯನೋ, ಕರ್ಣನೋ, ಈ ಮಹಾ ರಥಿಕರೆಲ್ಲಾ ದುರ್ಯೋಧನನ ಸೇನೆಯಲ್ಲಿದ್ದರು.

3. ಮಲ್ಲಿಗೇ ಹೂವೇನು, ಜಾಜೀಹೂವೇನು, ಇರ

ವಂತಿಗೆ ಹೂವೇನು, ರಾಂಬಾಣದ ಹೂವೇನು,
ಇದೆಲ್ಲಾ ಅನೇಕ ತಟ್ಟೆಗಳಲ್ಲಿರಿಸಿತ್ತು.

ವಿಧಿ ೬. ಕೆಲವು ಸಂದರ್ಭದಲ್ಲಿ ಕರ್ತೃಪದ ಲಿಂಗವೂ ಕ್ರಿಯೆಯ ಲಿಂಗವೂ ಭಿನ್ನಿಸಿರುವವು.

(1) ಪ್ರೀತಿಯಿಂದ ಮಕ್ಕಳ ವಿಷಯವನ್ನು ಹೇಳುವಾಗ ಕರ್ತೃ ಪುಲ್ಲಿಂಗವಾಗಲಿ ಸ್ತ್ರೀಲಿಂಗವಾಗಲಿ ಕ್ರಿಯೆಯು ನಪುಂಸಕಲಿಂಗವಾಗಿಯೇ ಇರುವುದು.

ಉ—ರಾಮಸ್ವಾಮಿ ಬಂತು.
ಸೀತಮ್ಮ ಓದುತಾ ಇದೆ.

(2) ದೇವರ ವಿಷಯದಲ್ಲಿ ನಿತ್ಯವಾಗಿ ನಪುಂಸಕಲಿಂಗವೇ ಪ್ರಯೋಗದಲ್ಲಿದೆ.

ಉ—ನರಸಿಂಹಸ್ವಾಮಿಬಂತು.
ವಿನಾಯಕ ಹೊರಟಿತು.

(3) ಸೂರ್ಯ, ಚಂದ್ರ, ಇವು ಅರ್ಥದಲ್ಲಿ ನಪುಂಸಕವಾದಾಗ್ಯೂ ಪುಲ್ಲಿಂಗದ ಪ್ರತ್ಯಯಗಳನ್ನು ಹೊಂದಿ ಪುಲ್ಲಿಂಗದ ಕ್ರಿಯೆಯನ್ನೇ ಆಕಾಂಕ್ಷಿಸುವವು.

ಉ—ಸೂರ್ಯ ಹುಟ್ಟುತಾ ಇದಾನೆ.
ಚಂದ್ರ ಪ್ರಕಾಶಿಸುತಾನೆ.

<u>ವಿಚಾರ</u>— ಈ ಎರಡು ಶಬ್ದಗಳನ್ನೂ ಅದರ ಕ್ರಿಯೆಯನ್ನೂ ನಪುಂಸಕಲಿಂಗವಾಗಿಯೇ ಪ್ರಯೋಗಿಸುವ ಪದ್ಧತಿಯೂ ಉಂಟು.

ಉ—ಸೂರ್ಯ ಹುಟ್ಟುತಾ ಇದೆ.

ವಿಧಿ ೭. ಸಂಘವನ್ನು ಒಟ್ಟು ಕೂಡಿಸಿ ಹೇಳುವ ನಾಮಪದವು ಏಕತ್ವವನ್ನು ತೋರಿಸಿದರೆ ಕ್ರಿಯೆಯು ಏಕವಚನದಲ್ಲಿಯೂ, ಬಹುತ್ವವನ್ನು ತೋರಿಸಿದರೆ ಬಹುವಚನದಲ್ಲಿಯೂ ಬರುವುದು.

ಉ—1. ಆ ಊರಜನ ಈ ಊರಮೇಲೆ ನುಗ್ಗಿತು.
2. ಆ ಜನರು ಪಂಗಡಗಳಾದರು.

ವಿಧಿ ೮. ಎರಡು ಅಥವಾ ಹೆಚ್ಚಿನ ಕರ್ತೃಗಳು ಒಟ್ಟಿಗೆ ಸೇರಿದಾಗ,

(1) ಪ್ರತಿ ಕರ್ತೃವಿನ ಕಡೆಯಲ್ಲಿ ಸಮುಚ್ಚಯದ 'ಊ' ಕಾರ ಬರುವುದು; ಕ್ರಿಯೆಯು ಬಹುವಚನದಲ್ಲಿಯೇ ಇರಬೇಕು.

ಉ—ರಾಮನೂ ಕೃಷ್ಣನೂ ಬಂದರು.

(2) ಏಕವಚನದ ಅನೇಕ ಕರ್ತೃಗಳು ಒಟ್ಟಿಗೆ ಸೇರುವಾಗ ಕಡೇ ಕರ್ತೃವಿನ ಹಿಂದೆ 'ಮತ್ತು' 'ಮತ್ತೂ' 'ಮೇಲೂ' 'ಮೇಲಾಗಿ' 'ಇನ್ನು' 'ಅಲ್ಲದೆ' ಧಾರವಾಡದ ಪ್ರಾಂತ್ಯದಲ್ಲಿ 'ಹಾಂಗೂ' 'ಹಾಗೂ' ಈ ಶಬ್ದಗಳು ಬರುವವು. ಅಲ್ಲಿ ಕ್ರಿಯಾ ಪದವು ಬಹುವಚನವಾಗಿಯೇ ಇರಬೇಕು.

ಉ—ಸದಾಶಿವರಾವ್, ವಿಶ್ವಾಸರಾವ್, ಮಲ್ಹಾರ್ಜಿ ಹೋಳ್ಕರ್ ಮತ್ತು ಜಾನೋಜಿ ಸಿಂಧ್ಯ, ಸೇನೆಯೊಡನೆ ದುರಾನಿಯವರ ಮೇಲೆ ಹೊರಟರು.

ಇಲ್ಲಿ 'ಮತ್ತು' ಎಂಬ ಶಬ್ದಕ್ಕೆ ಬದಲಾಗಿ 'ಮೇಲೂ' 'ಹಾಂಗೂ' ಮೊದಲಾದವುಗಳನ್ನು ಹಾಕಿಕೊಂಡರೆ ಈ ಉದಾಹರಣೆಯೇ ಎಲ್ಲಕ್ಕೂ ಆಗಬಹುದು.

ಇಂಥಾ ಸಂದರ್ಭದಲ್ಲಿ ಕಡೇ ಕರ್ತೃವಿನ ಆಚೆ 'ಇವರೆಲ್ಲಾ' 'ಇಂಥಾವರೆಲ್ಲಾ' ಎಂಬ ಶಬ್ದಗಳನ್ನು ಪ್ರಯೋಗಿಸುವ ಒಂದು ಒಳ್ಳೇ ಪದ್ಧತಿ ಉಂಟು.

ಉ—ರಾಮ, ಲಕ್ಷ್ಮಣ, ಭರತ, ಮೇಲೂ ಶತ್ರುಘ್ನ ಇವರೆಲ್ಲಾ ಸಭೆಗೆ ಬಂದರು.

ವಿಧಿ ೯. 'ಅಥವಾ' 'ಆಗಲಿ' 'ಏ ಆಗಲಿ' 'ಓ' 'ಆಯಿತು' 'ಏ ಆಯಿತು' ಈ ಶಬ್ದಗಳು ಏಕವಚನದ ಅಥವಾ ಭಿನ್ನವಚನದ ಹಲವು ಕರ್ತೃಗಳ ಕೊನೆಯಲ್ಲಿ ಬರುವುದುಂಟು. ಆಗ ಕೊನೆಯಲ್ಲಿ 'ಒಬ್ಬರು' ಅಥವಾ 'ಯಾರಾದರೂ ಒಬ್ಬರು' ಎಂಬ ಶಬ್ದಗಳು ಬರುವವು. ಇಂಥಾಕಡೆ ಕ್ರಿಯೆಯು ಬಹುವಚನವಾಗಿಯೇ ನಿಲ್ಲುವುದು.

ಉ—1. ರಾಮ ಅಥವಾ ಕೃಷ್ಣ ಬರುತಾರೆ.

2. ರಾಮನಾಗಲಿ ಕೃಷ್ಣನಾಗಲಿ ಬರುತಾರೆ.

3. ರಾಮನೇ ಆಗಲಿ ಕಷ್ಣನೇ ಆಗಲಿ ಬರುತಾರೆ.

4. ರಾಮನೋ ಕೃಷ್ಣನೋ ಬರುತಾರೆ.

5. ರಾಮ ಆಯಿತು ಕೃಷ್ಣ ಆಯಿತು ಬರುತಾರೆ.

6. ರಾಮನೇ ಆಯಿತು ಕೃಷ್ಣನೇ ಆಯಿತು ಬರುತಾರೆ.

ಆದರೆ ಕರ್ತೃಗಳಕೊನೆಯಲ್ಲಿ 'ಒಬ್ಬರು' 'ಯಾರಾವರೂ' 'ಯಾರಾದರೊಬ್ಬರು' ಈ ಶಬ್ದಗಳು ಬರುವುದೂ ಉಂಟು.

ಉ—1. ರಾಮನೋ ಕೃಷ್ಣನೋ ಒಬ್ಬರು ಬರುತಾರೆ.

2. ರಾಮನಾಗಲಿ ಕೃಷ್ಣನಾಗಲಿ ಯಾರಾದರೂ ಒಬ್ಬರು ಬರುತಾರೆ.

ಇಲ್ಲಿ ಒಬ್ಬರು ಎಂಬ ಶಬ್ದದಿಂದ ಏಕವಚನ ಸೂಚನೆಯಾದರೂ ಒಬ್ಬರಿಗಿಂತಲೂ ಹೆಚ್ಚಾದ ಕರ್ತೃಗಳ ಸಂಬಂಧವಿರುವಕಾರಣ ಕ್ರಿಯೆಗೆ ಬಹುವಚನವು ರೂಢಿಯಲ್ಲಿ ಬಂದಿದೆ.

ವಿಧಿ ೧೦. (1) ಹಲವು ಗುಣವಾಚಕಗಳೂ, ಗುಣವಾಚಕ ಸ್ವಭಾವವುಳ್ಳ ಕೃದ್ವಾಚಿಗಳೂ, ಬಂದು

ಏಕವಚನದ ನಾಮವಾಚಕಕ್ಕೆ ವಿಶೇಷಣವಾಗಿ ಸಿಂತರೆ, ಕ್ರಿಯೆಯು ಏಕವಚನದಲ್ಲಿಯೇ ಇರುವುದು.

ಉ—ಬಿಳೀ, ಕರೀ, ಉದ್ದವಾದ, ದಪ್ಪವಾದ, ತೊಲೆಯು ಸಿಕ್ಕಿತು.

ಈ ಗುಣವಾಚಕಗಳೆಲ್ಲಾ ಒಂದೇ ಪದಾರ್ಥವನ್ನು ವಿಶೇಷಿಸುವವು.

(2) ಆದರೆ ವಿಶೇಷಣದ ಸ್ವಭಾವದಿಂದ ಬಹುತ್ವಸೂಚನೆಯಾದರೆ, ಆಗ ನಾಮಪದವು ಬಹುವಚನದಲ್ಲಿಯೇ ಇರಬೇಕು.

ಉ—ಆ ಗುಂಪಿನಲ್ಲಿ ಓದುವ, ಆಡುವ, ಬರೆಯುವ ಹುಡುಗರಿದ್ದರು.

(3) ಇಂಥಾ ಗುಣವಾಚಕ ಸ್ವರೂಪವಾದ ಕೃದ್ವ್ಯಾಚಿಗಳ ಕೊನೆಯಲ್ಲಿ 'ಅಂಥಾ' ಎಂದು ಸೇರಿಸಿಕೊಳ್ಳುವುದುಂಟು.

ಉ—ನಗುವಂಥಾ, ಅಳುವಂಥಾ, ಆಡುವಂಥಾ, ಹುಡುಗರಿದ್ದರು.

ವಿಧಿ ೧೧. ಹಲವು ಕರ್ತೃಗಳಿದ್ದಾಗ್ಯೂ ಅವುಗಳ ಕೊನೆಯಲ್ಲಿ ' ಇಂಥಾ ಒಂದೊಂದೂ ' ಅಥವಾ 'ಪ್ರತಿಯೊಂದೂ' ಎಂಬುದನ್ನು ಸೇರಿಸಿದರೆ ಕ್ರಿಯೆಯು ಏಕವಚನದಲ್ಲಿಯೇ ಇರತಕ್ಕದ್ದು.

ಉ—ಸೊಸಿ, ಗಿಡ, ಕೊಂಬೆ, ಎಲೆ, ಹೂವು, ಕಾಯಿ, ಹಣ್ಣು ಇಂಥಾ ಒಂದೊಂದೂ. (ಅಥವಾ ಪ್ರತಿಯೊಂದೂ) ಬ್ರಹ್ಮಸೃಷ್ಟಿಯಾಗಿದೆ.

ವಿಧಿ ೧೨. ಕ್ರಿಯೆಯು ಆಚೆ ಹಲವು ಕರ್ತೃಪದಗಳು ಬಂದರೆ ಕ್ರಿಯೆಯು ಏಕವಚನದಲ್ಲಿಯೇ ಇರುವುದು.

ಉ—ಆ ಗುಣ ಯಾರಿಗೆ ಬರುತ್ತೆ, ಆ ವಿನಯ, ಆ ಪಾಂಡಿತ್ಯ, ಆ ಸೌಜನ್ಯ?

## ವಿಭಕ್ತಿ ಪ್ರಯೋಗ.

### ಪ್ರಥಮಾವಿಭಕ್ತಿ

ವಿಧಿ ೧೭ ಕರ್ತೃವಿನ ಆಚೆ ಕ್ರಿಯೆ ಬರುವುದು ಸಹಜ. ಆದರೆ ಹಲವು ಕರ್ತೃಗಳು ಒಂದು ಕ್ರಿಯೆಗೆ ಬಂದು ಸಂಶಯಾರ್ಥ ಅಥವಾ ಅವಧಾರಣಾರ್ಥವನ್ನು ಸೂಚಿಸಿದರೆ, ಕರ್ತೃವು ಕ್ರಿಯೆಯ ಆಚೆ ಬರುವುದು.

ಉ—ಕೊಲ್ಲುವನೋ, ಕ್ಷಮಿಸುವನೋ, ರಾಮ.
ಕೊಲ್ಲುವನು, ಕಾಯುವವನು, ಕ್ಷಮಿಸುವವನು ರಾಮನೇ.

ವಿಧಿ ೧೮ ಬೇರೆ ಬೇರೇ ವಾಕ್ಯಗಳಲ್ಲಿ ಪ್ರಥಮಾ ವಿಭಕ್ತಿಯಲ್ಲಿರುವ ಎರಡು ಕರ್ತೃಗಳು ಬಂದರ ಹಿಂದೆಯೇ ಮತ್ತೊಂದು ಬರಕೂಡದು. ಎರಡಕ್ಕೂ ಮಧ್ಯೆ ಬೇರೆ ಶಬ್ದಗಳು ಬಂದು ಅರ್ಥವನ್ನು ವಿಶದ ಮಾಡಬೇಕು.

ಉ—'ಲಕ್ಷ್ಮಣ ರಾಮ ಹೇಳಿದಹಾಗೆ ಕೇಳುತಾನೆ,'
ಇದುತಪ್ಪು. ಹೇಳಿದ, ಕೇಳುತಾನೆ, ಎಂಬ ಎರಡರಲ್ಲಿ ಯಾವುದಕ್ಕೆ ಯಾವುದು ಕರ್ತೃವೋ ಸಂದಿಗ್ಧವಾಗಿದೆ. ಇದನ್ನು ತಪ್ಪಿಸುವುದಕ್ಕಾಗಿ, 'ರಾಮ ಹೇಳಿದಹಾಗೆ ಲಕ್ಷ್ಮಣ ಕೇಳುತಾನೆ' ಎಂದು ಪ್ರಧಾದ ಕರ್ತೃವಿನ ಸ್ಥಳವನ್ನು ಪಲ್ಲಟ ಮಾಡಿದರೆ ದೋಷ ನಿವಾರಣೆ ಯಾಗುವುದು.

ವಿಧಿ ೧೯. ಕರ್ತೃಪದದ ವಿಶೇಷಣಗಳೆಲ್ಲಾ ಅದಕ್ಕೆ ಹಿಂದುಗಡೆ ಇರಬೇಕು.

ಉ— ವಿದ್ಯಾವಂತನಾದ, ವಿಧೇಯನಾದ, ವಿನೀತನಾದ ಮಗನು ತಂದೆ ತಾಯಿಗಳಿಗೆ ಎರಡನೇ ಪ್ರಾಣವಾಗಿದಾನೆ.

ವಿಧಿ ೧೬. ಕರ್ತೃಪದದ ಆಚೆ ಕರ್ಮಪದ ಬರುವುದು.

ಉ—ರಾಮನು ರಾವಣನನ್ನು ಕೊಂದನು.

## ಸಂಬೋಧನಾ ವಿಭಕ್ತಿ.

ವಿಧಿ ೧೭ ಸಂಬೋಧನಾ ವಿಭಕ್ತಿಯಲ್ಲಿ ಯಾವ ವಿಭಕ್ತಿ ಪ್ರತ್ಯಯವೂ ಇಲ್ಲದೇ ನಾಮಪದವು ಪ್ರಕೃತಿರೂಪದಲ್ಲಿ ಬರುವುದು.

ಉ—ರಾಮ, ನೀನುಬಾ.

ವಿಧಿ ೧೮. 'ದೂರದಲ್ಲಿರುವವರನ್ನು ಕೂಗುವಾಗಲೂ, ಸಂಕಟದಲ್ಲಿಯೂ, ದೈನ್ಯದಲ್ಲಿಯೂ, ಪ್ರಾರ್ಥನೆಯಲ್ಲಿಯೂ, ನಾಮಪದವು, ದೀರ್ಘಾಂತವಾಗಿ ನಿಲ್ಲುವುದು.

ಉ—ರಾಮಾ, ಇಲ್ಲಿಬಾ. ರಾಮಾ, ಸಹಿಸಲಾರೆನಲ್ಲಾ
ರಾಮಾ, ನಾನು ಮತಿಹೀನ, ನೀನು ಕಾಪಾಡು.
ರಾಮಾ, ಎಲ್ಲರನ್ನೂ ಕಾಪಾಡು.

ಸಲಿಗೆಯಲ್ಲಿಯೂ, ತಿರಸ್ಕಾರದಲ್ಲಿಯೂ 'ಎಲ' 'ಎಲಾ' 'ಎಲವೊ' ಎಂದು ನಾಮಪದದ ಹಿಂದೆ ಬರುವುದು.

ಉ—ಎಲ ರಾಮಾ, ನೀನು ಕಾಣೆಯ?
ಎಲಾ ರಾಮ, ಛಿ, ಆಚೆಗೆನಡೆ.
ಎಲವೋ ನೀಚನೆ, ಕೇಳು.

ವಿಧಿ ೧೯. ಪುಲ್ಲಿಂಗದಲ್ಲಿ 'ಎಲ' ಎಂತಲೂ, ಸ್ತ್ರೀಲಿಂಗದಲ್ಲಿ 'ಎಲೆ' ಅಥವಾ 'ಎಲೌ' ಎಂತಲೂ, ನಾಮವಾಚಕದ ಹಿಂದೆ ಬರುವುದು. ಇದುಹೊರತು ಮತ್ತೆ ಯಾವ ಸರ್ವನಾಮವಾಗಲಿ, ನಾಮಪದಕ್ಕೆ ಬದಲಾಗಿ ಬರುವ ಮತ್ತೆ ಯಾವುದೇ ಆಗಲಿ ಸಂಬೋಧನಾವಿಭಕ್ತಿಯಲ್ಲಿ ಪ್ರಯೋಗಿಸಲ್ಪಡುವುದಿಲ್ಲ.

## ದ್ವಿತೀಯಾವಿಭಕ್ತಿ

ವಿಧಿ ೨೦. ದ್ವಿತೀಯಾ ವಿಭಕ್ತಿ ಪ್ರತ್ಯಯ ವನ್ನು ಬಿಟ್ಟು ಪ್ರಯೋಗಿಸುವುದುಂಟು.

ಉ—ಅನ್ನ ತಿನ್ನು.

ವಿಧಿ ೨೧. ಪ್ರಥಮಾವಿಭಕ್ತಿ ಪ್ರತ್ಯಯವನ್ನು ದ್ವಿತೀಯಾಭಕ್ತಿ ಪ್ರತ್ಯಯವನ್ನೂ ಶುದ್ಧಾಂಗವಾಗಿ ಬಿಟ್ಟುಬಿಡುವುದುಂಟು.

ಉ—ಅನ್ನ ಬರುವುದು, ಅನ್ನ ತಿನ್ನು.

ವಿಧಿ ೨೨. ಷಷ್ಠಿವಿಭಕ್ತಿಯನ್ನು ದ್ವಿತೀಯಾ ವಿಭಕ್ತಿಯಾಗಿ ಪ್ರಯೋಗಿಸುವುದುಂಟು.

ಉ—ದೊಡ್ಡ ಹುಡುಗನು ಚಿಕ್ಕ ಹುಡುಗರ ಹೊಡೆದನು,

ವಿಧಿ ೨೩. ದ್ವಿತೀಯಾವಿಭಕ್ತಿಗೆ ಚತುರ್ಥೀ ವಿಭಕ್ತಿ ರೂಪದಲ್ಲಿ ಪ್ರಯೋಗ ಉಂಟು.

ಉ—ಹನುಮಂತನು ರಾಕ್ಷಸರಿಗೆ ಹೊಡೆದ.

ವಿಧಿ ೨೪. ಕ್ರಿಯಾ ಸಮಾಸದಲ್ಲಿ ಪೂರ್ವಪದ ವನ್ನು ದೀರ್ಘಾಂತವಾಗಿ ಬರೆಯುವುದುಂಟು.

ಉ—ಊಟಾ ಮಾಡು, ನಿದ್ರೇಮಾಡು. ಸಾಲಾತಂದನು.
'ನಿದ್ರೇಮಾಡು' ಎನ್ನುವುದಕ್ಕೆ ಬದಲಾಗಿ 'ನಿದ್ರೆ ಹೋಗು!' ಎಂದು ಬರೆಯುತಾರೆ. ಇದು ಆಂಧ್ರ ಪ್ರಯೋಗವಾಗಿದೆ.

ವಿಧಿ ೨೪. ಕೆಲವು ಕ್ರಿಯೆಗಳಿಗೆ ಅದೇ ಕ್ರಿಯೆಯಿಂದ ಹುಟ್ಟಿದ ಕೃದಂತಗಳು ಕರ್ಮಪದವಾಗಿ ಬರುವವು.

ಉ—ಒಳ್ಳೇ ಬಾಳ ಬಾಳಿದನು. ಸಾಯುಕೊಲೆ ಕೊಂದನು. ಹೊಡೆತಾ ಹೊಡೆದ.

ವಿಧಿ ೨೬. ಕೆಲವು ಕ್ರಿಯೆಗಳಿಗೆ ಎರಡು ಕರ್ಮಪದಗಳು ಬರುವವು.

ಉ—ಜನರು ಒಳ್ಳೆಯವರನ್ನು ದೇವರನ್ನಾಗಿ ಪೂಜಿಸುತ್ತಾರೆ. ಸತ್ಸಹವಾಸವು ಕೆಟ್ಟವರನ್ನು ಒಳ್ಳೆಯವರನ್ನಾಗಿ ಮಾಡುವುದು.

ವಿಧಿ ೨೭. ಸ್ಥಳ, ಕಾಲ, ಆವರ್ತಿ, ಮೊದಲಾದ್ದನ್ನು ತೋರಿಸುವ ಕ್ರಿಯಾವಿಶೇಷಣಗಳನ್ನು ದ್ವಿತೀಯಾವಿಭಕ್ತಿ ಛಾಯೆಯಲ್ಲಿ ಪ್ರಯೋಗಿಸುವುದುಂಟು.

ಉ—ಪ್ರಯಾಣಿಕರು ಊರ ಸೇರಿದರು. ಆವನು ಮೂರು ವರುಷ ಮಾಮಲೇ ಮಾಡಿದನು.
ಹುಡುಗನು ಮೂರುಸಾರಿ ಪಾಠವನ್ನು ಬಾಯಲ್ಲಿ ಹೇಳಿದನು.

ವಿಧಿ ೨೮. ಕರ್ತೃವಾಗಿ ಬರುವುದೆಲ್ಲಾ ಯಥಾಸಂಭವವಾಗಿ ಕರ್ಮಪದವಾಗಿ ಬರುವುದು. ಉದಾಹರಣೆಯನ್ನು ಊಹಿಸಿಕೊಳ್ಳಬಹುದು.

ವಿಧಿ ೨೯. ಸಾಧಾರಣವಾಗಿ ಕರ್ಮಪದವು ಕರ್ತೃಪದದ ತರುವಾಯ ಕ್ರಿಯಾಪದದ ಹಿಂದೆ ಬರುವುದು.

## ತೃತೀಯಾ ವಿಭಕ್ತಿ.

ವಿಧಿ ೪೦. ಕಾರಣ, ಮೂಲ, ಆಯುಧ, ದೂರ, ಕಾಲದ ಪರಿಮಿತಿ, ಇವುಗಳನ್ನು ತೃತೀಯಾ ವಿಭಕ್ತಿ ತೋರಿಸುವುದು.

ಉ—ಶ್ರೀರಂಗಪಟ್ಟಣ ವಶವಾದ್ದರಿಂದ ದಕ್ಷಿಣದೇಶವೆಲ್ಲಾ ಇಂಗ್ಲೀಷರಿಗೆ ನಿರುಪಾಧಿಕವಾಗಿ ವಶವಾಯಿತು.
ನಾಯಿಬೇಲದ ಚಕ್ಕೆಯಿಂದ ಸಾರಾಯಿ ಆಗುವುದು.
ಭೀಮನು ಗದೆಯಿಂದ ದುರ್ಯೋಧನನನ್ನು ಕೊಂದನು.
ಮೈಸೂರಿಂದ ಬೆಂಗಳೂರಿಗೆ ೮೪ ಮೈಲಿ ಇದೆ.
ಭಾರತ ಯುದ್ಧವಾದಾಗಿನಿಂದ ಇಲ್ಲಿಗೆ ಎಷ್ಟೋ ಶತಮಾನವಾಯಿತು.

## ಚತುರ್ಥೀ ವಿಭಕ್ತಿ.

ವಿಧಿ ೪೧. ಕೊಡುವುದರಲ್ಲಿ ಚತುರ್ಥೀವಿಭಕ್ತಿ ಬರುವುದು.

ಉ—ಬ್ರಾಹ್ಮಣನಿಗೆ ದಾನವನ್ನು ಕೊಟ್ಟರು.

ವಿಧಿ ೪೨. ಸಂಬಂಧವನ್ನು ಹೇಳುವಾಗ ಚತುರ್ಥಿ ಬರುವುದು.

ಉ—ಧರ್ಮರಾಯನಿಗೆ ಭೀಮನು ತಮ್ಮನಾಗಬೇಕು.

ವಿಧಿ ೪೩. ಸ್ಥಳಪರಿಮಿತಿ ಕಾಲಪರಿಮಿತಿಯನ್ನು ಹೇಳುವಾಗ ಚತುರ್ಥಿ ಬರುವುದು.

ಉ—ಕೋಟೆಯಿಂದ ಪೇಟೆಗೆ ಮೂರು ಮೈಲಿ ಇದೆ.
ಪೂನೆರಾಜ್ಯ ಹೋಗಿ ಇಲ್ಲಿಗೆ ನೂರು ವರುಷಕ್ಕೆ ಬಂತು.

ವಿಧಿ ೩೪. 'ಇಗೆ' 'ಕ್ಕೆ' 'ಕ್ಕಾಗಿ' 'ಇಗೋಸ್ಕರ' 'ಕ್ಕೋಸ್ಕರ' ಎಂಬ ಪ್ರತ್ಯಯುಗಳು ಶಬ್ದದ ಕೊನೆಯಲ್ಲಿ ಬಂದು ಒಬ್ಬರ ಪಕ್ಷವನ್ನು ಸೂಚಿಸುವವು.

ಉ—ರಾಮನಿಗೆ ಅತ್ತಳು, ರಾಮನಿಗೋಸ್ಕರ ಅತ್ತಳು.
ಗಿಡಕ್ಕೆ ಅತ್ತನು, ಗಿಡಕ್ಕೋಸ್ಕರ ಅತ್ತನು.

ವಿಧಿ ೩೫. ಚತುರ್ಥೀವಿಭಕ್ತಿಯು ದಿಕ್ಕನ್ನೂ ಪರಿಣಾಮವನ್ನೂ ಸೂಚಿಸುವುದು.

ಉ—ಮೂಡಗಡೆಗೆ ತಿರುಗಿದನು.
ಕಡೆಗೆ ಹೀಗಾಯಿತು.

ವಿಧಿ ೩೬. ಅಂಗೀಕಾರಾರ್ಥದಲ್ಲಿ ಚತುರ್ಥಿ ಬರುವುದು.

ಉ—ಪೇಶ್ವೆಯ ಮಾತಿಗೆ ಸರದಾರರೆಲ್ಲರೂ ಒಪ್ಪಿದರು.

ವಿಧಿ ೩೭. ಚತುರ್ಥೀ ವಿಭಕ್ತಿಗೆ ಗೌರವಕ್ಕಾಗಿ ಸಪ್ತಮಿಯಲ್ಲಿ ಪ್ರಯೋಗವಿದೆ.

ಉ—ಪಾದಕ್ಕೆ ಒಪ್ಪಿಸಿದನು = ಪಾದದಲ್ಲಿ ಒಪ್ಪಿಸಿದನು.

## ಪಂಚಮೀ ವಿಭಕ್ತಿ.

ವಿಧಿ ೩೮. ತೃತೀಯಾರ್ಥದಲ್ಲಿ ದೂರಸಂಬಂಧವನ್ನೂ, ನಿಮಿತ್ತವನ್ನೂ ಹೇಳುವಾಗ ಪಂಚಮಿ ಬರುವುದು.

ಉ—ರಘೋಬನಿಂದಲೇ ಸೋಲಾಗಲಿಲ್ಲ; ರಘೋಬನ ದೆಸೆಯಿಂದ ಸೋಲಾಯಿತು.

'ದೆಸೆಯಿಂದ' ಎನ್ನುವುದಕ್ಕೆ 'ಕಡೆಯಿಂದ' ಎಂತ ಹೇಳುವುದೂ ಉಂಟು.

## ಷಷ್ಠೀ ವಿಭಕ್ತಿ.

ವಿಧಿ ೩೯. ಗುಣಸಂಬಂಧವನ್ನಾಗಲಿ ಪದಾರ್ಥ ಸಂಬಂಧವನ್ನಾಗಲಿ ಷಷ್ಠೀವಿಭಕ್ತಿ ತೋರಿಸುವುದು.

ಉ—ಭೀಮನ ಪರಾಕ್ರಮ.
ಸುಣ್ಣದ ಬಿಳಪು. ಪೆಟ್ಟಿಗೆಯ ಬೀಗ.

ವಿಧಿ ೪೦. ಕೆಲವು ಅವ್ಯಯಗಳ ಮತ್ತು ಉಪಸರ್ಗಗಳ ಹಿಂದೆ ಷಷ್ಠಿ ವಿಭಕ್ತಿ ಬರುವುದು.

ಉ—1 ಊರತನಕ ಬಂದ. ಇಲ್ಲಿಯವರೆಗೆ ಬಂದ.
2 ರಾಮನ ಮಟ್ಟಿಗೆ.

## ಸಪ್ತಮೀ ವಿಭಕ್ತಿ.

ವಿಧಿ. ೪೧. ಸಪ್ತಮೀ ವಿಭಕ್ತಿಯು ಸ್ಥಳವನ್ನು ತೋರಿಸುವುದು.

ಉ—ಊರಲ್ಲಿ ಅಥವಾ ಊರೊಳು ಜನರಿದಾರೆ.

ವಿಧಿ ೪೨. ಸಪ್ತಮಿಯು ಸ್ವಾಧೀನವನ್ನು ತೋರಿಸುವುದು.

ಉ—ಭೀಮನಲ್ಲಿ ಗಡೆ ಇತ್ತು.

ವಿಧಿ ೪೩. ಸಪ್ತಮೀವಿಭಕ್ತಿಯು ಗುಣವನ್ನು ತೋರಿಸುವುದು.

ಉ—ಅಂಗದನು ಮಾತಿನಲ್ಲಿ ಜಾಣ.

ಇದು ಕಾರಣಾವನ್ನು ತೋರಿಸುವ್ರದುಂಟು.

ಉ—ಕೆಟ್ಟವರ ಜಗಳದಲ್ಲಿ ಒಳ್ಳೆಯವರಿಗೆ ಕೇಡಾಯಿತು.

ಸಪ್ತಮಿಗೆ ತೃತೀಯಾರ್ಥ ಉಂಟು.

ಉ—ಮಳಲಲ್ಲಿ ತೈಲಾ ತೆಗೆಯುವುದು. =
ಮಳಲಿಸಿಂದ ತೈಲಾ ತೆಗೆಯುವುದು.

ವಿಧಿ ೪೪. ಸಪ್ತಮೀವಿಭಕ್ತಿಗೆ ಇತರ ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸುವುದುಂಟು.

ಉ—ರಾಮನಲ್ಲಿಗೆ ಹೋದರು. ರಾಮನಲ್ಲಿನ ದಯ ಬೇಕಾದಷ್ಟು ಇತ್ತು.

ವಿಧಿ ೪೫. ಲೆಕ್ಕದಲ್ಲಿ ಕಳೆಯುವಾಗ ಸಪ್ತಮಿ ಬರುವುದು.

ಉ—ಹತ್ತರಲ್ಲಿ ಐದನ್ನು ಕಳೆ.

ವಿಧಿ ೪೬. ಸತಿಸಪ್ತಮಿಯಲ್ಲಿ ಸಪ್ತಮಿ ಬರುವುದು.

ಉ—ಎಲ್ಲರೂ ಯುದ್ಧಕ್ಕೆ ಸಿದ್ಧವಾಗಿರುವಲ್ಲಿ, ಇನ್ನೊಂದು ವಿಚಿತ್ರ ನಡೆಯಿತು.

---

## ೨ ನೇ ಅಧ್ಯಾಯ.

### ಸರ್ವನಾಮ.

ವಿಧಿ ೪೭. ಸರ್ವನಾಮವು ಅಂತರ ನಾಮಪದದ ಪುರುಷ, ವಚನ, ಲಿಂಗಗಳನ್ನು ಹೊಂದುವುದು.

ಉ—ಸರಸ್ವತಿಯು ವಿದ್ಯಕ್ಕೆ ಅಧಿದೇವತೆ; ಅವಳು ಲೋಕಕ್ಕೆ ಜ್ಞಾನವನ್ನುಂಟುಮಾಡುತಾಳೆ.

ವಿಧಿ ೪೮. ವಾಕ್ಯದಲ್ಲಿ ಯಾವಯಾವ ಕರ್ತೃವಿಗೆ ಕ್ರಿಯೆಯು ಯಾವ ಲಿಂಗದಲ್ಲಿ, ವಚನದಲ್ಲಿ, ಬರುವುದೋ ಅಂಥಾ ಕರ್ತೃವಿಗೆ ಬದಲಾಗಿ ಬರುವ ಸರ್ವನಾಮವೂ ಅದೇ ಲಿಂಗದಲ್ಲಿ ವಚನದಲ್ಲಿ ಬರುವುದು.

ಉದಾಹರಣೆಯನ್ನು ಊಹಿಸಿಕೊಳ್ಳಿ.

ವಿಧಿ ೪೯. ಸ್ವಾರ್ಥದಲ್ಲಿ 'ತನ್ನ' 'ತಮ್ಮ' ಎಂದು ಬರುವುದು. ಇದಕ್ಕೆ ಲಿಂಗ ವ್ಯವಸ್ಥೆ ಇಲ್ಲ.

ಉ—ತನ್ನ ಕೆಲಸವನ್ನು ತಾನು ಮಾಡಿಕೊಳ್ಳಬೇಕು.

'ತಾವು' ಎಂಬುದು ಗೌರವಾರ್ಥದಲ್ಲಿ ಪ್ರಯೋಗಿಸಲ್ಪಡುವುದು.

ಉ—ಸ್ವಾಮಿ, ತಾವು ದಯಮಾಡಿಸಿ.

ವಿಧಿ ೫೦. ಷಷ್ಟೀವಿಭಕ್ತಿಯ ಸರ್ವನಾಮಕ್ಕೆ ಅವನು, ಅವಳು, ಅದು, ಅವರು, ಎಂಬ ಪ್ರತ್ಯಯ ರೂಪವಾದ ಸರ್ವನಾಮಗಳನ್ನು ಅಂಟಿಸಿದರೆ, ಹೊಸ ಸರ್ವನಾಮಗಳಾಗುವವು.

ಉ—ನಮ್ಮವನು, ನಮ್ಮವಳು, ನಮ್ಮದು, ನಮ್ಮವರು.

ವಿಧಿ ೫೧. ಪ್ರಶ್ನಾರ್ಥಕ ಸರ್ವನಾಮಗಳನ್ನು ನಿತ್ಯಸಂಬಂಧವುಳ್ಳ ಅಧೀನವಾಕ್ಯದಲ್ಲಿ ಪ್ರಯೋಗಿಸುವಾಗ ಅದಕ್ಕೆ ಸರಿಯಾದ ಎದುರು ಸರ್ವನಾಮ ಬರಬೇಕು.

ಉ—ಯಾವನು ತನ್ನ ಕಾರ್ಯವನ್ನು ಮಾಡುತಾನೋ ಅವನು ಧನ್ಯ.

ವಿಧಿ ೫೨. ಅದು, ಇದು, ಎಂಬ ಸರ್ವನಾಮಗಳನ್ನು ಗುಣವಾಚಕರೂಪವಾಗಿ ಪ್ರಯೋಗಿಸುವಾಗ ಆ, ಈ, ಎಂದು ಆಗುವವು.

ಉ—ಅದು ಕುದುರೆ = ಆ ಗುದುರೆ.
ಇದು ಊರು = ಈ ಊರು.

## ಸಂಬಂಧ ಸರ್ವನಾಮಗಳು.

ವಿಧಿ ೫೩. ಸಂಬಂಧ ಸರ್ವನಾಮಗಳು ಪ್ರಶ್ನೆಯಲ್ಲಿಯೂ ಸಂಬಂಧದಲ್ಲಿಯೂ ಪ್ರಯೋಗಿಸಲ್ಪಡುವವು.

ಉ—ನೀನು ಯಾರು ? ಅದು ಏನು ? ಯಾರು ಈ ಮಾತನ್ನು ಹೇಳಿದನೋ ಆ ಮನುಷ್ಯ.

## ಸಂಖ್ಯಾವಾಚಕ.

ವಿಧಿ ೫೪. ಸಂಖ್ಯಾ ನಾಮವಾಚಕವು ನಾಮ ಪದದಂತೆ ರೂಪ ನಿಷ್ಪತ್ತಿಯನ್ನು ಹೊಂದುವುದು.

ಉ—ಒಂದು, ಎರಡು.

ಗೊತ್ತಿಲ್ಲದೆ ಬಹುತ್ವವನ್ನು ಹೇಳುವಾಗ ಲೆಕ್ಕವನ್ನು ಹೇಳುವುದುಂಟು.

ಉ—ನೂರಾರು, ಸಾವಿರಾರು.

ವಿಧಿ ೫೫. ಸಂಖ್ಯಾಗುಣವಾಚಕವು ಗುಣವಾಚಕದಂತೆ ಪ್ರಯೋಗಿಸಲ್ಪಡುವುದು.

ಉ—ನಾಲ್ಕು ದಿಕ್ಕು, ಆರು ರೂಪಾಯಿ.

ಗೊತ್ತಿಲ್ಲದ ಲೆಕ್ಕವನ್ನು ಹೇಳುವುದು ಸಂಖ್ಯಾಗುಣವಾಚಕದಲ್ಲಿಯೂ ಪ್ರಯೋಗವಿದೆ.

ಉ—ನೂರು ಜನ, ನೂರಾರು ಜನ.

ಒಂದು ಎಂಬುದನ್ನು ಹಿಂದೆ ಸೇರಿಸುವುದೂ ಉಂಟು.

ಉ—ಒಂದುನೂರು ಜನ. ಒಂದು ಇಪ್ಪತ್ತು ರೂಪಾಯಿ.
ಒಂದು ನೂರಾರು ಹಸುಗಳು.

'ಒಂದು' 'ಒಂದಾನೊಂದು' ಎಂಬ ಸಂಖ್ಯಾ ಗುಣವಾಚಕವನ್ನು ಗಣನೆಯಲ್ಲಿ ಅಲ್ಲದೆ ಅನಿರ್ದಿಷ್ಟವಾಗಿ ಪ್ರಯೋಗಿಸುವುದುಂಟು.

ಉ—ಒಂದಾನೊಂದು ಪಟ್ಟಣವಿತ್ತು, ಆ ಪಟ್ಟಣದಲ್ಲಿ ಒಂದು ನರಿ ಇತ್ತು.

'ಒಂದು' 'ಒಂದೊಂದು' 'ಪ್ರತಿಯೊಂದು' ಎಂಬುವುದು ನಿರ್ದಿಷ್ಟಾರ್ಥದಲ್ಲಿ ಪ್ರಯೋಗವಿದೆ.

ಉ—ಒಂದೊಂದು ಇಟ್ಟಿಗೆಯನ್ನೂ ಸೇರಿಸಿದರೆ ಗೋಡೆಯಾಗುವುದು.
ಪ್ರತಿಯೊಂದು ಮಾತಿಗೂ ಅರ್ಥವಿದೆ.

ವಿಧಿ ೫೬. ಸಂಖ್ಯಾ ನಿರ್ದಿಷ್ಟವಾಚಕವು ಪುರುಷಾರ್ಥಕ ಸರ್ವನಾಮಗಳ ಹಿಂದೆ ಸೇರಿ ರೂಪ ನಿಷ್ಪತ್ತಿಯನ್ನು ಹೊಂದುವುದು.

ಉ—ಮೂರನೆಯವನು, ಮರನೆಯವಳು, ಮೂರನೆಯದು.

ಮೂರನೆಯೋನು, ಮೂರನೆಯೋಳು, ಮೂರನೇದು, ಎಂಬ ರೂಪಗಳು ಪ್ರಯೋಗಗವ್ಯಗಳು.

ವಿಧಿ ೫೭. ಸಂಖ್ಯಾ ಗುಣವಾಚಕವು ನಾಮವಾಚಕದ ಹಿಂದೆ ನಿಂತು ಅದರ ಎಣಿಕೆಯನ್ನು ತೋರಿಸುವುದು.

ಉ—ಮರನೇ ಹುಡುಗ ಐದನೇ ಸಾರಿ.

ಕೆಲವರು 'ಮೂರನೆಯ ಹುಡುಗ' ಎಂದು ಪ್ರಯೋಗಿಸುವರು. ಇಲ್ಲಿ ಮೂರಕ್ಕೆ ಹುಡುಗನ ಸಂಬಂಧವನ್ನು ತೋರಿಸಿದಂತಾಗುವುದು. 'ಮೂರನೇ' ಎಂಬುವುದು ಸಮಸ್ತ ಪದದ ಹಾಗೆ ನಿಂತು ಹುಡುಗನ ನಿರ್ದಿಷ್ಟ ಸಂಖ್ಯೆಯನ್ನು ಗಣನೆಯಲ್ಲಿ ತೋರಿಸುವುದು.

## ಪರಿಮಾಣ ವಾಚಕಗಳು.

ವಿಧಿ ೫೮. 'ಕೆಲವು' ಎಂಬುವುದು ಸ್ವಲ್ಪ ಸಂಖ್ಯೆಗೂ 'ಹಲವು' ಎಂಬುವುದು ಹೆಚ್ಚು ಸಂಖ್ಯೆಗೂ ಪ್ರಯೋಗಿಸಲ್ಪಡುವವು.

ಉ—ಕೆಲವರು ಉಳಿದರು, ಹಲವರು ಹೋದರು.

ಆದರೆ ಈ ಶಬ್ದಗಳಿಗೆ ನಾಮವಾಚಕವು ಪರದಲ್ಲಿ ಬಂದರೆ ಇವುಗಳಿಗೆ ಗುಣವಾಚಕದ ಸ್ವಭಾವ ಬರುವುದು.

ಉ—ಕೆಲವು ಜನ ದೊರೆಯ ಪಕ್ಷವನ್ನು ವಹಿಸಿದರು.
ಹಲವು ಜನ ಪ್ರಜೆಗಳ ಪಕ್ಷವನ್ನು ಹಿಡಿದರು.

ವಿಧಿ ೫೯. ಅಲ್ಪ, ಸ್ವಲ್ಪ, ಕೊಂಚ, ತುಸ, ಕಡಮೆ, ವಿಶೇಷ, ಹೆಚ್ಚು, ತುಂಬ, ಬಹಳ, ಅಪಾರ, ಬಹುಮಟ್ಟಿಗೆ, ಬಹಳಮಟ್ಟಿಗ, ಬಹಳಮಾಡಿ, ವಿಶೇಷ, ಇವೇ ಮೊದಲಾದ ಶಬ್ದಗಳು ಸ್ವತಂತ್ರವಾಗಿ ಪ್ರಯೋಗಿಸಲ್ಪಟ್ಟರೆ ಮೊತ್ತದ ಪರಿಮಾಣವನ್ನು ತೋರಿಸುವವು. ಇವುಗಳ ತರುವಾಯ ಬಂದು ನಾಮಪದ ಬಂದರೆ ಆಗ ಇವುಗಳು ಗುಣವಾಚಕದ ಸ್ವಭಾವವನ್ನು ಹೊಂದುವವು. ಉದಾಹರಣೆಯನ್ನು ಊಹಿಸಿಕೊಳ್ಳಬಹುದು.

'ಬಹಳವಾಡಿ' ಎಂಬುವುದು ಶಿವಮೊಗ್ಗ, ಧಾರವಾಡ, ಮೊದಲಾದ ಪ್ರಾಂತಗಳಲ್ಲಿ ಪ್ರಯೋಗವಿದೆ.

ಉ—ಬಹಳ ಮಾಡಿ ಜನರು ಹೊರಟರು

## ಗುಣವಾಚಕ

ವಿಧಿ ೬೦. ಗುಣವಾಚಕವು ಯಾವ ನಾಮವಾಚಕದ ಗುಣವನ್ನು ತೋರಿಸುವುದೋ ಅಂಥಾ ನಾಮವಾಚಕದ ಹಿಂದೆ ಬರುವುದು.

ಉ—ದೊಡ್ಡ ಊರು, ಕೆಂಪು ಬಟ್ಟೆ.

ಕೆಲವು ಸ್ಥಳಗಳಲ್ಲಿ ಗುಣವಾಚಕದ ಅಂತ್ಯಾಕ್ಷರಲೋಪವಾಗಿ ಅದಕ್ಕೆ ಬದಲಾಗಿ ಅದರ ಹಿಂದಿನ ಅಕ್ಷರ ಧೀರ್ಘವಾಗಿ ಬರುವುದು.

ಉ—ಕಿರಿದು ಮಗ=ಕಿರೀ ಮಗ.
ಬಿಳಿದು ಕಾಗದ=ಬಿಳೀ ಕಾಗದ.

ಕೆಲವರು ಹಿಂದಿನ ಅಕ್ಷರವನ್ನು ಹ್ರಸ್ವವಾಗಿಯೂ ಪ್ರಯೋಗಿಸುವರು.

ಉ—ಕಿರಿ ಮಗ, ಬಿಳಿ ಕಾಗದ.

ಇದು ರೂಢಿಯಲ್ಲಿ ಕಿವಿಗೆ ಇಂಪಾದ ಪ್ರಯೋಗವಲ್ಲವೆಂದು ಕೆಲವರು ತಿಳಿಯುವರು.

ವಿಧಿ ೬೧. ಸಂಸ್ಕೃತ ಮತ್ತು ಕನ್ನಡ ಗುಣವಾಚಕಗಳಿಗೆ 'ಆದ' ಎಂಬ ಮತ್ತು ನಾಮವಾಚಕಗಳಿಗೆ 'ಉಳ್ಳ' ಎಂಬ ಶಬ್ದರೂಪದ ಪ್ರತ್ಯಯಗಳನ್ನು ಸೇರಿಸುವುದರಿಂದ ಅನೇಕ ಗುಣವಾಚಕಗಳಾಗುವವು

ಉ—ನೀಲವಾದ ಬಟ್ಟೆ, ನೈಲ್ಯವುಳ್ಳ ಬಟ್ಟೆ.
ಚಿಕ್ಕಮನೆ, ಚಿಕ್ಕದಾದ ಮನೆ.

ವಿಧಿ ೬೨. ಗುಣವಾಚಕಕ್ಕೆ ನೈಜ, ತರ, ತಮ, ಎಂಬ ಮೂರು ಭೇದಗಳುಂಟಷ್ಟೆ. ಎರಡು ಪದಾರ್ಥಗಳ ಗುಣವನ್ನು ಹೋಲಿಸುವಾಗ 'ತರ' ವನ್ನೂ 'ಅತಿ' ಯನ್ನೂ ಪ್ರಯೋಗಿಸುವರು.

ಉ—ನೂಲಿನ ಬಟ್ಟೆಯು ತುಬಟ್ಟೆದ ಬಟ್ಟೆಗಿಂತಲೂ ಮೃದುತರವಾದ್ದು.
ನೂಲಿನ ಬಟ್ಟೆಯು ತುಬಟದ ಬಟ್ಟೆಗಿಂತಲೂ ಅತಿ ಮೃದುವಾದ್ದು.

ಎರಡಕ್ಕಿಂತಲೂ ಹೆಚ್ಚಾದ ಪದಾರ್ಥಗಳಲ್ಲಿ ಒಂದರ ಗುಣವು ಎಲ್ಲಕ್ಕಿಂತಲೂ ಹೆಚ್ಚಾಗಿದೆ ಎಂದು ತೋರಿಸುವಾಗ 'ತಮ' 'ಅತ್ಯಂತ' ಎಂಬುವುಗಳನ್ನು ಪ್ರಯೋಗಿಸುವರು.

ಉ—ನೂಲಿನ ಬಟ್ಟೆ, ತುಬಟದ ಬಟ್ಟೆ, ಇವೆರಡಕ್ಕಿಂತಲೂ ರೇಶ್ಮೆ ಬಟ್ಟೆ ಮೃದುತಮವಾದ್ದು. ಅಥವಾ ಅತ್ಯಂತ ಮೃದುವಾದ್ದು.

ವಿಚಾರ—'ತರ' 'ತಮ' ಇವು ಗುಣಗಳನ್ನು ಹೇಳುವಾಗ ಉದಾಹರಣೆಯಲ್ಲಿ ತೋರಿಸಿರುವ ಹಾಗೆ ಹಿಂದೆ 'ಇಂತ' 'ಕಿಂತ' 'ಗಿಂತ' ಎಂಬ ಉಪಸರ್ಗ ವಿರಲೇಬೇಕು.

ವಿಧಿ ೬೩. ತರ, ತಮ, ಅತಿ, ಅತ್ಯಂತ, ಇವುಗಳನ್ನು ಪ್ರಯೋಗಿಸಿ ತಾರತಮ್ಯಗಳನ್ನು ತೋರಿಸುವುದು ತತ್ಸಮ ಅಥವಾ ಸಂಸ್ಕೃತ ಶಬ್ದಗಳಿಗೆ ಮಾತ್ರ ಒಪದ್ದು. ಕನ್ನಡ ಗುಣವಾಚಕಗಳ ಹೋಲಿಕೆಯನ್ನು

ತೋರಿಸುವಾಗ 'ಹೆಚ್ಚು' 'ಕಮ್ಮಿ' ಎಂಬ ಶಬ್ದಗಳನ್ನು ಪ್ರಯೋಗಿಸುವರು. ಆದರೆ ಇವುಗಳ ಮುಂದೆ 'ಆದ' 'ಉಳ್ಳ' ಎಂಬ ಶಬ್ದಗಳು ನಿಯತವಾಗಿ ಬರುವವು.

ಉ—ಕೆಂಪಾದ ಹೂವು, ಹೆಚ್ಚು ಕೆಂಪಾದ ಹೂವು, ಕಮ್ಮಿ ಕೆಂಪಾದ ಹೂಹು; ಕೆಂಪುಳ್ಳ ಹೂವು, ಹೆಚ್ಚು ಕೆಂಪುಳ್ಳ ಹೂವು. ಕಮ್ಮಿ ಕೆಂಪುಳ್ಳ ಹೂವು.

ವಿಚಾರ—ಇಂತ, ಕಿಂತ, ಗಿಂತ, ಎಂಬ ಪ್ರತ್ಯಯಗಳಿಗೆ ಬದಲಾಗಿ 'ಕಂಟ' 'ಗಂಟ' ಎಂದು ಪ್ರಯೋಗಿಸುವರು, ಇದು ತಪ್ಪು. ಇದು ತೆನುಗು ಭಾಷೆಯ ಸಬಂಧದಿಂದ ಹುಟ್ಟಿದ್ದು.

ಉ—ಅವನಿಗಿಂಟ ಇವನು ಯೋಗ್ಯ.

ಕೆಲವರು 'ಇಂದ' ಎಂಬುದನ್ನು ಪ್ರಯೋಗಿಸುವರು.

ಉ—ಸುಗ್ರೀವನಿಂದ ವಾಲಿ ಶೂರ.

ಇದು ಹಿಂದುಸ್ಥಾನಿಭಾಷೆಯ ರೀತಿಯಾಗಿದೆ.

ಕೆಲವರು ಚತುರ್ಥೀವಿಭಕ್ತಿಯನ್ನು ಪ್ರಯೋಗಿಸುವರು.

ಉ—ಸುಗ್ರಿವನಿಗೆ ವಾಲಿ ಶೂರ.

---

## ೩ ನೇ ಅಧ್ಯಾಯ.

### ಕ್ರಿಯಾಪದ

ವಿಧಿ ೬೪. ಕ್ರಿಯೆಯು ಕರ್ತೃಪದದ ಪುರುಷ,

ಲಿಂಗ, ವಚನ, ಇವುಗಳನ್ನೇ ಹೊಂದುವುದು. ಇದಕ್ಕೆ ಉದಾಹರಣೆಯನ್ನು ಊಹಿಸಿಕೊಳ್ಳಬಹುದು.

ವಿಧಿ ೬೫. ಭಿನ್ನ ಪುರುಷದ ಕರ್ತೃಗಳು ಸಮುಚ್ಚಯದ ದೀರ್ಘದಿಂದಲೂ 'ಮತ್ತು' 'ಮೇಲೂ' ಎಂಬ ಅವ್ಯಯಗಳಿಂದಲೂ ಸೇರಿಸಲ್ಪಟ್ಟದ್ದರೆ, ಕ್ರಿಯೆಯು ಅವುಗಳಲ್ಲಿ ಆದಿಪುರುಷವನ್ನೇ ಹೊಂದುವುದು. ಹೇಗೆಂದರೆ ಉತ್ತಮ ಮಧ್ಯಮ ಪುರುಷಗಳು ಸೇರಿದ್ದಲ್ಲಿ, ಕ್ರಿಯೆ ಉತ್ತಮ ಪುರುಷದಲ್ಲಿ ಬರುವುದು ಉತ್ತಮ ಪ್ರಥಮ ಪುರುಷಗಳು ಸೇರಿದ್ದಲ್ಲಿ, ಕ್ರಿಯೆಯು ಉತ್ತಮ ಪುರುಷದಲ್ಲಿ ಬರುವುದು. ಮಧ್ಯಮ ಪ್ರಥಮ ಪುರುಷಗಳು ಸೇರಿದ್ದಲ್ಲಿ, ಕ್ರಿಯೆಯು ಮಧ್ಯಮ ಪುರುಷದಲ್ಲಿ ಬರುವುದು.

ಉ—ನಾನೂ ನೀನೂ ಹೋಗುತೇವೆ.
ನಾನೂ ಅವನೂ ಹೋಗುತೇವೆ.
ನೀನೂ ಅವನೂ ಹೋಗುತೀರಿ.

ವಿಧಿ ೬೬. ಭಿನ್ನಪುರುಷ, ವಚನ, ಲಿಂಗ, ಉಳ್ಳ ಕರ್ತೃಗಳಲ್ಲಿ ಕೆಲವು ನಿಷೇಧಿಸಲ್ಪಟ್ಟು ಕೆಲವು ವಿಧಿಯಾಗಿ (Affiarmtive) ಬಂದಿದ್ದರೆ, ಕ್ರಿಯೆಯು ವಿಧ್ಯರ್ಥದ ಕರ್ತೃವಿನ, ಪುರುಷ, ವಚನ, ಲಿಂಗಗಳನ್ನೇ ಹೊಂದುವುದು.

ಉ—ನಾನಲ್ಲ, ರಾಮ ಓದುತಾನೆ.
ರಾಮನಲ್ಲ, ನಾನು ಓದುತೇನೆ.
ನಾನೂ ಅಲ್ಲ, ರಾಮನೂ ಅಲ್ಲ, ನೀನು ಓದುತೀಯೆ.

<u>ವಿಚಾರ</u>—ಭಿನ್ನಪುರುಷಗಳ ಕರ್ತೃಗಳು ಸೇರಿ ಬಂದಾಗ ಕನ್ನಡದಲ್ಲಿ ಹಿಂದಿನ ಪುರುಷವೇ ಮೊದಲು ಬರುವುದು.

## ಸಕರ್ಮಕಕ್ರಿಯೆ.

ವಿಧಿ ೬೭. ಸಕರ್ಮಕಕ್ರಿಯೆ ಬಂದಾಗ ಕರ್ಮಪದ ಬರಲೇ ಬೇಕು.

ಉ—ಅಭಿಮನ್ಯುವನ್ನು ಸೈಂಧವ ಹೊಡೆದನು.

ಅರ್ಥ ವಿಶದವಾಗಿದ್ದರೆ ಕರ್ಮಪದವನ್ನು ಬಿಟ್ಟುಬಿಡುವುದುಂಟು.

ಉ—ಅಭಿಮನ್ಯುವನ್ನು ಸೈಂಧವ ಹೊಡೆದ, ಕರ್ಣನೂ ಹೊಡೆದ.

ವಿಧಿ ೬೮. ಕರ್ಮಪದವು ಕ್ರಿಯಾಪದದ ಫಲವನ್ನು ಪಡೆಯದೇ ಇದ್ದಾಗ್ಯೂ ಕೆಲವುಕಡೆ ಸಕರ್ಮಕ ಕ್ರಿಯೆಯನ್ನು ಪ್ರಯೋಗಿಸುವುದುಂಟು.

ಉ—ಹುಡುಗರು ಚೆಂಡನ್ನು ಆಡುತ್ತಾರೆ.
ಮಗು ನಿದ್ರೆಮಾಡುತಿದೆ,

ತೆಲಗರು 'ನಿದ್ರೆ ಪೋಗುತಿದೆ' ಎಂದು ಪ್ರಯೋಗಿಸುತ್ತಾರೆ. ಇದು ಕನ್ನಡದಲ್ಲಿ ಅಪ್ರಸಿದ್ಧ.

ವಿಧಿ ೬೯. ಕ್ರಿಯಾಪದವು 'ಇರು' ಧಾತುವಿನಿಂದ ಹುಟ್ಟಿದ್ದಾಗ ಎರಡು ನಾಮಪದಗಳಲ್ಲಿ ಏಕತ್ವವನ್ನು ಬೋಧಿಸುವಾಗ, ಎರಡನೇ ನಾಮಪದದ ಅಂತ್ಯದಲ್ಲಿ 'ಆಗಿ' ಎಂಬ ಪ್ರತ್ಯಯವು ಬರುವುದು.

ಉ—ಭೀಮನ ತಮ್ಮ ಅರ್ಜುನನಾಗಿದಾನೆ.

ಇಂಥಾ ಸಂದರ್ಭದಲ್ಲಿ ಅನೇಕವೇಳೆ ರೂಢಿಯಾಗಿ ಕ್ರಿಯೆಯು ಲೋಪವಾಗಿ ಅಧ್ಯಾಹಾರವಾಗುವುದುಂಟು.

ಉ—ಭೀಮನ ತಮ್ಮ ಅರ್ಜುನ.

ವಿಧಿ ೭೦. ಸಕರ್ಮಕ ಕ್ರಿಯಾಪದವನ್ನು ಕರ್ತ್ರರ್ಥಕವಾಗಿ ಯಾಗಲಿ ಕರ್ಮಣ್ಯರ್ಥಕವಾಗಿಯಾಗಲಿ ಪ್ರಯೋಗಿಸಬಹುದು. ಆದರೆ ಕರ್ತ್ರರ್ಥಕ ಕ್ರಿಯೆಯನ್ನು ಕರ್ಮಣ್ಯರ್ಥವಾಗಿ ತಿರುಗಿಸಬಹುದು. ಈ ಸಂದರ್ಭದಲ್ಲಿ ಕರ್ತೃಪದ ಕರ್ಮಪದವಾಗಿಯೂ ಕರ್ಮಪದ ಕರ್ತೃಪದವಾಗಿಯೂ ಆಗುವುದು; ಮತ್ತು ಕ್ರಿಯಾಪದವು 'ಅಲ್' ಎಂಬ ಪ್ರತ್ಯಯದೊಡನೆ ಭಾವರೂಪದಲ್ಲಿ ನಿಂತು 'ಪಡು' ಎಂಬ ಉಪಕ್ರಿಯೆಯನ್ನು ಹೊಂದುವುದು

ಉ—ಕೌರವರು ಪಾಂಡವರಿಂದ ಗೆಲ್ಲಲ್‌ಪಟ್ಟರು.

1. ವಿಚಾರ—'ಪಡು' ಎಂಬ ಉಪಕ್ರಿಯೆಯು ಯಾವಾಗಲೂ ಸ್ವಾರ್ಥದಲ್ಲಿಯೇ ಪ್ರಯೋಗಿಸಲ್ಪಡುವುದು. ಕ್ರಿಯಾಪದದ ಫಲವನ್ನು ಕರ್ಮಪದವು ಹೊಂದುವುದರಲ್ಲಿ ಸ್ವಾರ್ಥವೇ ಇದ್ದಂತೆ ಆಯಿತು.

2. ವಿಚಾರ—ಕನ್ನಡದಲ್ಲಿ ಕರ್ಮಣಿ ಪ್ರಯೋಗ ವಿಶೇಷ ರೂಢವಾಗಿಲ್ಲ. 'ಮನೆ ಕಟ್ಟಲ್ಪಟ್ಟಿತು' ಎನ್ನುವುದಕ್ಕೆ ಬದಲಾಗಿ 'ಮನೆ ಕಟ್ಟಿತು' ಎಂದು ಕನ್ನಡ ಪ್ರಯೋಗ ಹೇರಳವಾಗಿದೆ.

ವಿಧಿ ೭೧. 'ಇರು' ಧಾತುವು ಪ್ರಧಾನಕ್ರಿಯೆಯಾಗಿ ಅರ್ಥಕೊಡುವುದೂ ಉಂಟು, ಉಪಕ್ರಿಯೆ

ವಾಗಿ ಬೇರೇ ಒಂದು ಪ್ರಧಾನಕ್ರಿಯೆಯು ಮುಂದೆ ಬರುವುದೂ ಉಂಟು.

ಪ್ರಧಾನಕ್ರಿಯೆಗೆ, ಉ—ದೇವರು ಇದಾನೆ. ಸತ್ಯವಿದೆ.
ಉಪಕ್ರಿಯೆಗೆ, ಉ—ನಾವು ಹಾಕಿದ ವೃಕ್ಷವು ತನ್ನ ಫಲವನ್ನು ಕೊಡುತಿದೆ.

ವಿಚಾರ—ಕೆಲವರು 'ಇರು' ಧಾತುವಿನ ರೂಪವನ್ನು ಕೆಡಿಸಿ, ಇದೇನೆ, ಇದೀಯೆ, ಇದಾನೆ, ಇದಾಳೆ, ಇದೆ, ಇದಾರೆ, ಇವೆ, ಮೊದಲಾದವುಗಳಿಗೆ ಬದಲಾಗಿ ಅದೇನೆ, ಅದೀಯೆ, ಅದಾನೆ, ಅದಾಳೆ, ಅದೆ, ಎಂಬದಾಗಿ ಪ್ರಯೋಗಿಸುವರು. ಇದು ತಪ್ಪು ಇಲ್ಲಿ ಧಾತು 'ಇರು' ಎಂಬದಾಗಿದೆ. 'ಅರು' ಎಂದು ಧಾತುವಿಲ್ಲ. ಒಂದು ವೇಳೆ ಹಾಗೆ ಹೇಳಿದಾಗ್ಯೂ 'ಇರು' ಎಂಬ ಧಾತುವಿನ ಹಾಗೆ 'ಅರು' ಎಂಬುವುದನ್ನು ರೂಪನಿಷ್ಪತ್ತಿ ಮಾತುವಾಗ ಸಾಮ್ಯರೂಪವಾಗಿ, ಇದ್ದ, ಇರುವ, ಇದ್ದೆ, ಇರುವೆ, ಇದ್ದೀಯೆ, ಇರುತೀಯೆ — ಇವೇ ಮೊದಲಾದ ರೂಪಗಳಂತೆ, ಅದ್ದ, ಅರುವ, ಅದ್ದೆ, ಅರುವೆ, ಅದ್ದೀಯೆ, ಅರುತೀಯೆ, ಎಂದು ಪ್ರಯೋಗಿಸಬೇಕಾಗುವುದು. ಆದರೆ ಇದು ಕನ್ನಡವಲ್ಲ, ಅಪ್ರಸಿದ್ಧವಾದ್ದು.

ವಿಧಿ ೩೨. 'ಇರು' ಎಂಬ ಕ್ರಿಯೆಯು ತನಗೆ ತಾನೇ ಪ್ರಧಾನಕ್ರಿಯೆಯಾಗಿಯೂ ಉಪಕ್ರಿಯೆಯಾಗಿಯೂ ಏಕಕಾಲದಲ್ಲಿ ಬರುವುದುಂಟು.

ಉ—ಇರುತಿದಾನೆ. ಇದ್ದುಕೊಂಡಿದಾನೆ.

ವಿಧಿ ೩೬. 'ಇಸು' ಪ್ರತ್ಯಯವನ್ನು ಕೆಲವು ನಾಮವಾಚಕ, ಅವ್ಯಯ, ಇವುಗಳಿಗೆ ಸೇರಿಸಿದರೆ ಕ್ರಿಯಾರ್ಥ ಉಳ್ಳ ಧಾತುವಾಗುವುದು.

ಉ—ಸ್ತುತಿಸು, ದುಃಖಿಸು, ಗಲಗಲಿಸು, ಥಳಥಳಿಸು.

ಇದನ್ನು ಕೆಲವು ಕ್ರಿಯಾಪದಗಳಿಗೆ ಸೇರಿಸಿದರೆ ಸಕರ್ಮಕ, ಪ್ರೇರಕ, ಕ್ರಿಯೆಗಳಾಗುವವು.

ಉ—ತರು-ತರಿಸು, ನಡೆ-ನಡಿಸು.

ಕೆಲವು ಕ್ರಿಯೆಗಳ ಕೊನೆಯಲ್ಲಿ, ಸು, ಇಸು, ಸೇರಿದ್ದರೂ ಅದು ಪ್ರತ್ಯಯವಲ್ಲ, ಶಬ್ದದ ಸಹಜ ರೂಪವೆಂದು ತಿಳಿಯಬೇಕು.

ಉ—ಬಳಸು, ತೊಳಸು, ಕನವರಿಸು, ಅಪ್ಪಳಿಸು, ಬಾರಿಸು.

ಇಸು ಪ್ರತ್ಯಯವನ್ನು ಕೆಲವು ಅನ್ಯದೇಶ್ಯ ಶಬ್ದಗಳಿಗೆ ಸೇರಿಸಿ ಹೊಸಕ್ರಿಯೆಗಳನ್ನು ಮಾಡುವರು.

ಉ—ಸುನಾಯಿಸು, ದಫನಾಯಿಸು, ಕಟಾಯಿಸು.

## ಕ್ರಿಯಾಪದ—ರೂಪಗಳು.

ವಿಧಿ ೩೮. ಕಾರ್ಯವು ಈಗ ನಡೆಯಿತು ಎಂಬು ವುದನ್ನು ವರ್ತಮಾನರೂಪ ತೋರಿಸುವುದು.

ಉ—ಹುಡುಗರು ಓದುತಾರೆ.

ವಿಧಿ ೩೯. ವರ್ಣನೆಯಲ್ಲಿ ಜನರ ಮನಸ್ಸಿಗೆ ಚೆನ್ನಾಗಿ ಅಂಟುವುದಕ್ಕಾಗಿ ಭೂತರೂಪವನ್ನು ವರ್ತ ಮಾನರೂಪದಲ್ಲಿ ಪ್ರಯೋಗಿಸಿ ಈಗ ಕಾರ್ಯ ನಡೆ ಯುತಾ ಇದೆಯೋ ಎನ್ನುವಹಾಗೆ ತೋರಿಸುವರು.

ಉ—ಅರ್ಜುನ ಏಳುತ್ತಾನೆ, ಸಿಂಹನಾದ ಮಾಡುತ್ತಾನೆ, ಬಾಣವನ್ನು ಹೆದೆಗೆ ಸರಿಸುತ್ತಾನೆ.

ವಿಧಿ ೩೬. ಕನ್ನಡದಲ್ಲಿ ಭವಿಷ್ಯದ್ರೂಪಕ್ಕೂ ವರ್ತಮಾನರೂಪಕ್ಕೂ ವಿಶೇಷವಾಗಿ ಭೇದವಿಲ್ಲ. ಆದ್ದರಿಂದ ವರ್ತಮಾನವನ್ನು ಭವಿಷ್ಯತ್ತಾಗಿ ಪ್ರಯೋಗಿಸುವರು.

ಉ—ಹುಡುಗರು ಓದುವರು.

ವಿಧಿ ೩೭. ಭೂತರೂಪದ ಪ್ರಥಮಪುರುಷ ಪುಲ್ಲಿಂಗೈಕವಚನದಲ್ಲಿ ಕೊನೇ 'ನ' ಕಾರಕ್ಕೆ ಲೋಪ ಬರುವುದುಂಟು.

ಉ—ಅವನು ಹೋದ = ಅವನು ಹೋದನು.

ವಿಧಿ ೩೮. ಭೂತಕೃದ್ವಾಚಿಯ ಮೇಲೆ, 'ರೆ' 'ಒಡೆ' 'ಪಕ್ಷದಲ್ಲಿ' ಎಂಬ ಪ್ರತ್ಯಯಗಳು ಸೇರಿದರೆ, ಸಂಶಯ ರೂಪವಾಗುವುದು.

ಉ—ಸೂರ್ಯ ಮುಳುಗಿದರೆ ಕತ್ತಲೆಯಾಗುವುದು.
ಸೂರ್ಯ ಮುಳುಗಿದೊಡೆ ಕತ್ತಲೆಯಾಗುವುದು.
ಸೂರ್ಯ ಮುಳುಗಿದ ಪಕ್ಷದಲ್ಲಿ, ಕತ್ತಲೆಯಾಗುವುದು.

ವಿಚಾರ—ಒಂದೊಂದು ವೇಳೆ ಈ ಪ್ರತ್ಯಯವಿಲ್ಲದೆ ಪ್ರಯೋಗಿಸಿದಾಗಲೂ ಸಂಶಯರೂಪವಾಗುವುದು.

ಉ—ಸೂರ್ಯ ಮುಳುಗಿದ, ಕತ್ತಲೆಯಾಗುವುದು.

'ಎನ್ನು' 'ಎಂದು ಹೇಳು' 'ಎಂದು ಒಪ್ಪಿಕೊ' 'ಎಂದು ಊಹಿಸು' 'ಎಂದು ಇಟ್ಟುಕೊ' ಇವೇ ಮೊದಲಾದ ವಿಧಿರೂಪದ ಪ್ರಧಾನಕ್ರಿಯೆಗಳಿಗೆ, 'ಸೂರ್ಯ ಮುಳುಗಿದ' ಎಂಬುವುದನ್ನು ನಾಮಾತ್ಮಕ

ಕರ್ಮವಾಕ್ಯವಾಗಿ ಮಾಡಿ ಸಂಶಯಾರ್ಥವನ್ನು ಕೊಡುವ ಹಾಗೆ ಪ್ರಯೋಗಿಸುವುದುಂಟು.

ಉ—ಸೂರ್ಯ ಮುಳುಗಿದ ಎನ್ನು, ಕತ್ತಲೆಯಾಗುವುದು.
ಸೂರ್ಯ ಮುಳುಗಿದ ಎಂದು ಹೇಳು, ಕತ್ತಲೆಯಾಗುವುದು.

ಈ ಪ್ರಕಾರ ಇತರ ಉದಾಹರಣೆಗಳನ್ನು ಊಹಿಸಿಕೊಳ್ಳ.

ವಿಧಿ ೭೯. ವಿಧಿರೂಪಕ್ಕೆ ಸಂಶಯ ರೂಪದಲ್ಲಿ ಪ್ರಯೋಗವುಂಟು.

ಉ—ಸೂರ್ಯ ಮುಳುಗಲಿ, ಕತ್ತಲೆಯಾಗುವುದು.

ವಿಧಿ ೮೦. ಭೂತಕೃದ್ವ್ಯಾಚಿಗೆ 'ಅಲ್ಲದೆ' 'ಹೊರತು' ಮೊದಲಾದ ನಿಷೇಧಾರ್ಥವನ್ನು ಕೊಡುವ ಪ್ರತ್ಯಯಗಳು ಪರವಾಗಿ ನಿಷೇಧ ಸಂಶಯವನ್ನು ಸೂಚಿಸಿದರೆ, ಪ್ರಧಾನವಾಕ್ಯದ ಕ್ರಿಯೆಯು ನಿಷೇಧ ರೂಪದಲ್ಲಿ ಬರುವುದು.

ಉ—ಮೆಟ್ಟಿದರೆ ಹಾವು ಕಚ್ಚುವುದು, ಎಂಬ ಕಡೆ, ಮೆಟ್ಟಿ
ದಲ್ಲದೆ ಹಾವು ಕಚ್ಚದು;
ಮೆಟ್ಟಿದ ಹೊರತು ಹಾವು ಕಚ್ಚದು.

ವಿಚಾರ—ಚಿತ್ರದುರ್ಗ ಧಾರವಾಡ ಮೊದಲಾದ ಪ್ರಾಂತದಲ್ಲಿ 'ಮೆಟ್ಟದ ಹೊರತು ಹಾವು ಕಚ್ಚದು' ಎನ್ನುವುದಕ್ಕೆ ಬದಲಾಗಿ 'ಮೆಟ್ಟದ ಹೊರತು' ಎಂದು ಬರೆಯುತಾರೆ. ಇದು ತಪ್ಪು.

ವಿಧಿ ೮೧. ವಿಧಿರೂಪವು ಆಜ್ಞೆಯಲ್ಲಿಯೇ ಅಲ್ಲದೆ ವಿನಯದಲ್ಲಿಯೂ ಪ್ರಾರ್ಥನೆಯಲ್ಲಿಯೂ ಪ್ರಯೋಗಿಸಲ್ಪಡುವುದು.

ಉ—ಆಜ್ಞೆಗೆ–ಆಳು ಆ ಗೊಡೆಯನ್ನು ಹಾಕಲಿ, ನೀನು ಅವನಿಂದ ಕೆಲಸವನ್ನು ಮಾಡಿಸು.

ವಿನಯಕ್ಕೆ—ಅಮ್ಮ, ಕೂತುಕೊ.
ಮಹಾಜನಗಳೆಲ್ಲರೂ ಕೂತುಕೊಳ್ಳಲಿ.

ಪ್ರಾರ್ಥನೆಗೆ—ದೇವರೇ, ನೀನು ಕಾಪಾಡು.
ಶ್ರೀರಾಮ ಕಾಪಾಡಲಿ.

ವಿಧಿ ೮೨. ಭಾವರೂಪಗಳಮೇಲೆ, ಬೇಕು, ಬೇಡ, ಬಹುದು, ಬಾರದು, ಕೂಡದು, ಅಲ್ಲ, ಇಲ್ಲ, ಈ ಮೊದಲಾದ ರೂಪವಿಹೀನ ಅವ್ಯಯ ಕ್ರಿಯೆಗಳನ್ನು ಸೇರಿಸಿದರೆ ಹಲವು ವಿಧಿರೂಪಗಳಾಗುವವು.

ಉ—ಹುಡುಗರು ಓದಬೇಕು.
ಕೆಟ್ಟವರಲ್ಲಿ ಒಳ್ಳೆಯವರು ಸೇರಬೇಡ.
ಪಂಡಿತರು ಮೇಲ್‌ಪಜ್ತಿಗೆ ದಯಮಾಡಿಸಬಹುದು.
ಯಾರೂ ಸುಳ್ಳನ್ನು ಹೇಳಬಾರದು.
ತಾಯಿತಂದೆಗಳ ಸೇವೆಯ ಬಿಟ್ಟಿರಕೂಡದು.

ಅಹುದು, ಆಗದು, ಎಂಬ ಉಪಕ್ರಿಯೆಗಳು ಭಾವರೂಪದ 'ಅಲ್' ಪ್ರತ್ಯಯದ ಮೇಲೆಯೇ ಸೇರುವವು.

ಉ—ಭಾಗ್ಯವಂತರು ಲೋಕೋಪಕಾರವನ್ನು ಮಾಡಲಹುದು.
ಹುಡುಗರು ಕೆಟ್ಟ ಅಭ್ಯಾಸಗಳನ್ನು ಮಾಡಲಾಗದು.

ವಿಧಿ ೮೩. ಭಾವರೂಪಗಳು ತಮ್ಮ ಆಚೆ ಬರುವ ಕ್ರಿಯೆಯ ಉದ್ದೇಶ್ಯವನ್ನು ತೋರಿಸುವವು.

ಉ—ಸಾಧುಗಳನ್ನು ಕಡಿಯಬಂದ ಶತ್ರುವು ಅವರಿಗೆ ಪಾದಾಕ್ರಾಂತನಾದನು.

ವಿಧಿ ೮೪. ಭಾವರೂಪವು ಒಂದೊಂದು ವೇಳೆ ಕರ್ಮಪದದ ಅರ್ಥವನ್ನು ಕೊಡುವುದು.

ಉ—ತ್ರಿಶಂಕುವು ಯಜ್ಞಮಾಡಲು ಯತ್ನಿಸಿದನು.

ವಿಧಿ ೮೫. ಭಾವರೂಪವು ಕಾಲ, ಕಾರಣ, ತ್ವರೆ, ಇವುಗಳನ್ನು ತೋರಿಸುವುದು.

ಉ—ಹನುಮಂತನು ಸೀತೆಯ ವೃತ್ತಾಂತವನ್ನು ಹೇಳಲು, ರಾಮನಿಗೆ ಬಹು ಸಂತೋಷವಾಯಿತು.

ವಿಚಾರ—ಭಾವರೂಪದ ಹಲವು ಕ್ರಿಯೆಗಳನ್ನು ಕರ್ತೃವಿನ ಅರ್ಥದಲ್ಲಿ ಬೇಸರಿಕೆ ತೋರಿಸಲು ಪ್ರಯೋಗಿಸುವುದುಂಟು.

ಉ—ಬೆಳಗ್ಗೆ ಏಳಲು, ಮನೇ ಕೆಲಸಮಾಡಲು, ಊಟಾ ಮಾಡಲು, ಚಾಕರಿಗೆ ಹೋಗಲು, ಮನೆಗೆಬರಲು ಇದು ನನಗೆ ಬಹು ಬೇಜಾರಾಗಿದೆ.

ಭಾವರೂಪಕ್ಕೆ ಈ ವಿಧವಾದ ಪ್ರಯೋಗವು ಶುದ್ಧವಾಗಿ ತೆಲಗಿನಿಂದ ಬಂದದ್ದು. ಕನ್ನಡವಲ್ಲ. ಈ ಭಾವರೂಪಗಳು ಕ್ರಿಯಾನಾಮದ ಅರ್ಥವನ್ನು ಕೊಡುವವು.

ವಿಚಾರ—ಭಾವರೂಪವು ಒಂದೊಂದು ವೇಳೆ ಪ್ರಧಾನ ಕ್ರಿಯೆಯ ಫಲವನ್ನು ಸೂಚಿಸುವುದು.

ಉ—ಬಾಯಿಗೆ ನೀರ ಕೇಳ ಹೊಡೆದ.

ವಿಧಿ ೮೬. ನ್ಯೂನರೂಪವು ಭಾವಾರ್ಥದಲ್ಲಿ ಪ್ರಯೋಗಿಸಲ್ಪಡುವುದುಂಟು.

ಉ—ಹತ್ತರಲ್ಲಿ ನಾಲ್ಕು ಹೋಗುತ ಬಾಕಿ ಆರು ಇದೆ=
ಹತ್ತರಲ್ಲಿ ನಾಲ್ಕು ಹೋಗಲು ಬಾಕಿ ಆರು ಇದೆ.

---

# ೮ ನೇ ಅಧ್ಯಾಯ.

## ಅವ್ಯಯ.

ವಿಧಿ ೮೭. ಸ್ಥಳವನ್ನೂ, ಕಾಲವನ್ನೂ, ತೋರಿಸುವ ಕ್ರಿಯಾ ವಿಶೇಷಣಾವ್ಯಯಗಳಿಗೆ ನಾಮವಾಚಕದಂತೆ ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸುವುದುಂಟು. ಆ ಸಂದರ್ಭದಲ್ಲಿ ಅಂಥಾ ಅವ್ಯಯವನ್ನು ನಾಮಪದದಂತೆ ಭಾವಿಸಬೇಕು.

ಉ—ಮೇಲಿನಿಂದ, ಮೇಲಕ್ಕೆ. ಮೇಲಿನ, ಮೇಲಿನಲ್ಲಿ ಇತ್ಯಾದಿ.
ನಾಳೆಯನ್ನು, ನಾಳೆಯಿಂದ, ನಾಳೆಗೆ ಇತ್ಯಾದಿ.

ವಿಧಿ ೮೮. ಕ್ರಿಯೆಯನ್ನು ನ್ಯೂನರೂಪದಲ್ಲಿ ಕ್ರಿಯಾವಿಶೇಷಣಾವ್ಯಯವಾಗಿ ಪ್ರಯೋಗಿಸುವರು.

ಉ—ಹುಡುಗರು ಹೋಗುತಾ ಬರುತಾ ತಿಂಡಿ ತಿನ್ನುತಾರೆ.
ಹೋಗಿಬಂದು (ಪುನಃ ಪುನಃ) ದೇವರ ಧ್ಯಾನ ಮಾಡು.

ವಿಧಿ ೮೯. ಹೇಗೊ, ಎಷ್ಟೋ, ಎಲ್ಲಿಯೋ, ಯಾವಾಗಲೋ, ಎಂತೋ, ಇವೇ ಮೊದಲಾದ ಪ್ರಶ್ನಾ

ರ್ಥಕಾವ್ಯಗಳ ಆಚೆ ತತ್ಸಂಬಂಧ ಉತ್ತರವಾಗುವಂತೆ ಹಾಗೆ, ಅಷ್ಟು, ಅಲ್ಲಿ, ಆವಾಗ, ಅಂತು, ಇವು ಬಂದು ಅರ್ಥವನ್ನು ಪೂರ್ತಿಮಾಡುವವು.

ಉ—ಹೇಗೋ ಹಾಗೆ ಕೆಲಸವನ್ನು ತೂಗಿಸಿ = ಸಾಧಾರಣವಾಗಿ.

ಎಷ್ಟೋ ಅಷ್ಟು ಮಾತು = ಹೆಚ್ಚುಮಾತು ಕೂಡದೆಂಬ ಧ್ವನಿ.

ಎಲ್ಲಿಯೋ ಅಲ್ಲಿ = ಎಲ್ಲಿಯಾದರೂ ಒಂದು ಕಡೆ.

ಯಾವಾಗಲೋ ಆವಾಗ, ಎಂತೋ ಅಂತು. ಇತ್ಯಾದಿ

ವಿಧಿ ೯೦. ಸಂಬಂಧ ಕಾವ್ಯಯುಗಳಲ್ಲಿ, ಸಮುಚ್ಚಯಾರ್ಥಕ ಅಥವಾ ಅನುಕೂಲಾರ್ಥಕ, ವಿರೋಧಾರ್ಥಕ, ಗೌಣಾರ್ಥಕ, ಕಾರ್ಯ ಕಾರಣಾರ್ಥಕ ಅಥವಾ ಹೇತ್ವರ್ಥಕ, ಎಂದು ಉಂಟು

ಅನುಕೂಲ ಸಂಬಂಧ—-ಮತ್ತು, ಇನ್ನೂ, ಮೇಲಾಗಿ.

ವಿರೋಧಸಂಬಂಧ-—ಆದರೆ, ಅಲ್ಲದಿದ್ದರೆ.

ಗೌಣಾರ್ಥಕ ಸಂಬಂಧ—ಅಥವಾ, ಆಗಲಿ-ಆಗಲಿ.

ಹೇತ್ವರ್ಥಕ—ಆದ್ದರಿಂದ, ಯಾಕೆಂದರೆ.

ವಿಧಿ ೯೧. ಸಮುಚ್ಚಯಕ್ಕೆ ಸಂಬಂಧಿಸುವ ಪ್ರತಿಶಬ್ದದ ಕೊನೆಯಲ್ಲಿಯೂ 'ಊ' ಕಾರಬರುವುದು.

ಉ—ಸ್ನಾನವೂ, ಮಡಿಯೂ, ಆಚಾರವೂ, ಆಹ್ನಿಕವೂ, ಜಪವೂ, ಚಿತ್ತ ಸ್ಥೈರ್ಯಕ್ಕೂ, ಚಿತ್ತ ನೈರ್ಮಲ್ಯಕ್ಕೂ ಕಾರಣಗಳು.

---

# ೨ನೇ ಭಾಗ.

# ವಾಕ್ಯ ವಿಚಾರ.

---

## ೧ನೇ ಅಧ್ಯಾಯ

೧. ಪೂರ್ಣವಾಗಿ ಅರ್ಥವನ್ನು ಕೊಡುವ ಶಬ್ದಗಳ ಗುಂಪಿಗೆ ವಾಕ್ಯವೆಂದು ಹೆಸರು. ಪ್ರತಿ ವಾಕ್ಯದಲ್ಲಿಯೂ

(1) ಕ್ರಿಯೆಯನ್ನು ಮಾಡುವಕರ್ತೃ.
(2) ಕರ್ತೃಮಾಡುವ ಕ್ರಿಯೆ.
ಇವೆರಡೂ ಮುಖ್ಯವಾಗಿರಲೇಬೇಕು.

ಉ—ಸೂರ್ಯನು ಪ್ರಕಾಶಿಸುತಾನೆ.

ಇಲ್ಲಿ "ಸೂರ್ಯನು" ಕಾರ್ಯವನ್ನು ಮಾಡತಕ್ಕವನು. ಇದು ಕರ್ತೃ.

"ಪ್ರಕಾಶಿಸುತಾನೆ" ಎಂಬುದೇ ಸೂರ್ಯ ಮಾಡುವ ಕಾರ್ಯ. ಇದು ಕ್ರಿಯೆ.

ಈ ಎರಡರಲ್ಲಿ ಬರೀ "ಸೂರ್ಯನು" ಎಂದರೆ ಏನಮಾಡುತ್ತಾನೆ? ಎಂತಲೂ, ಬರೀ "ಪ್ರಕಾಶಿಸುತಾನೆ" ಎಂದರೆ ಯಾರು? ಎಂತಲೂ, ಪ್ರಶ್ನೆ ಬರುವುದು. ಇವೆರಡೂ ಸೇರಿ ಅರ್ಥವನ್ನು ಪೂರ್ತಿಮಾಡುವವು.

೨. ಕರ್ತೃಕ್ರಿಯೆ ಇವೆರಡರಿಂದ ಅರ್ಥ ಪೂರ್ತಿಯಾಗದೆ ಕ್ರಿಯೆಯ ಫಲಕ್ಕೆ ವಿಷಯವಾದ ಇನ್ನೊಂದು

ಪದವು ಇರಬೇಕಾದ್ದು ಒಂದು ಸಂದರ್ಭದಲ್ಲಿ ಅಗತ್ಯ ವಾಗಿರುವುದು. ಇಂಥಾ ವಾಕ್ಯದ ಹೊಸ ಅಂಗಕ್ಕೆ

(3) ಕರ್ಮಪದ ಎಂದು ಹೆಸರು.

ಉ—ರಾಮನು ರಾವಣನನ್ನು ಸಂಹರಿಸಿದನು.

ಇಲ್ಲಿ 'ರಾಮನು' ಕರ್ತೃ; 'ಸಂಹರಿಸಿದನು' ಕ್ರಿಯೆ. ಹೀಗೆ 'ರಾಮನು ಸಂಹರಿಸಿದನು?' ಎಂದರೆ ಅರ್ಥ ಪ್ರೂರ್ತಿಯಾಗಲಿಲ್ಲ. ಯಾರನ್ನು ಸಂಹರಿಸಿದನು? 'ಸಂಹರಿಸಿದನು' ಎಂಬ ಕ್ರಿಯೆಯು ಫಲವನ್ನು ಅನುಭ ವಿಸಿದವರು ಯಾರು? ಎಂದು ಪ್ರಶ್ನೆಹುಟ್ಟುವುದು ಇಲ್ಲಿ ರಾವಣನನ್ನು ಎಂಬುದು 'ಕರ್ಮಪದವಾಗಿದೆ.' ಕರ್ತೃವಿಗೆ ಆಖ್ಯೆ ಎಂತಲೂ ಕ್ರಿಯೆಗೆ ಆಖ್ಯಾತವೆಂ ತಲೂ ಕರ್ಮಪದಕ್ಕೆ ಆಖ್ಯಾತ ಸಮಾಪಕವೆಂತಲೂ ಸಂಕೇತವಿದೆ.

೩. ವಾಕ್ಯದ ಮುಖ್ಯ ಅಂಗಗಳಾದ ಆಖ್ಯೆ, ಆಖ್ಯಾತ, ಆಖ್ಯಾತಸಮಾಪಕ, ಇವುಗಳಿಗೆ ಸಹಾ ಯಕ ಅಂಗಗಳುಂಟು. ಈ ಸಹಾಯಕ ಅಂಗಗಳು ಆಖ್ಯೆಯ ಗುಣವನ್ನು ಹೇಳುವಾಗ ಆಖ್ಯಾವಿಶೇಷಣ ವೆಂತಲೂ, ಆಖ್ಯಾತವನ್ನು ವಿಶೇಷಿಸುವಾಗ ಆಖ್ಯಾತ ವಿಶೇಷಣವೆಂತಲೂ, ಆಖ್ಯಾತಸಮಾಪಕದ ಗುಣ ವನ್ನು ಹೇಳುವಾಗ ಆಖ್ಯಾತಸಮಾಪಕ ವಿಶೇಷಣ ವೆಂತಲೂ ಹೆಸರು.

೪. ಆಖ್ಯೆ ಆಖ್ಯಾತಗಳನ್ನುಳ್ಳದ್ದಾಗಿ ಪರಾಪೇಕ್ಷೆ ಇಲ್ಲದೆ ಪೂರ್ಣಾರ್ಥವನ್ನು ಸ್ವತಂತ್ರವಾಗಿ ಬೋಧಿ ಸುವ ಶಬ್ದ ಸಮುದಾಯಕ್ಕೆ ಪ್ರಧಾನವಾಕ್ಯವೆಂದು ಹೆಸರು.

ಆಖ್ಯೆ ಆಖ್ಯಾತಗಳನ್ನುಳ್ಳದ್ದಾಗಿ ಪೂರ್ಣಾರ್ಥವನ್ನು ಕೊಡದೆ ಪ್ರಧಾನವಾಕ್ಯದ ಸಹಾಯದಿಂದ ಅರ್ಥವನ್ನು ಕೊಡುವ ಶಬ್ದ ಸಮುದಾಯಕ್ಕೆ ಅಧೀನ ವಾಕ್ಯವೆಂದು ಹೆಸರು.

ವಿಚಾರ — ಭಾವರೂಪಗಳೂ ಕೃನ್ನಾಮ ಕ್ರಿಯಾನಾಮಗಳೂ ಅಧೀನವಾಕ್ಯದಲ್ಲಿ ಕ್ರಿಯೆಯ ಸ್ಥಾನವನ್ನು ಹೊಂದುವವು.

೫. (1) ಒಂದು ಆಖ್ಯೆಯನ್ನೂ ಒಂದು ಆಖ್ಯಾತವನ್ನೂ ಉಳ್ಳದ್ದಾಗಿ ಪೂರ್ಣಾರ್ಥವನ್ನು ಕೊಡುವ ವಾಕ್ಯಕ್ಕೆ ಸಾಮಾನ್ಯವಾಕ್ಯವೆಂದು ಹೆಸರು.

ಉ—ಚಂದ್ರನು ಪ್ರಕಾಶಿಸುತಾನೆ.

(2) ಒಂದು ಪ್ರಧಾನವಾಕ್ಯವನ್ನೂ ಒಂದು ಅಥವಾ ಅನೇಕ ಅಧೀನವಾಕ್ಯಗಳನ್ನೂ ಉಳ್ಳ ಶಬ್ದ ಸಮುದಾಯಕ್ಕೆ ಸಮ್ಮಿಶ್ರಿತವಾಕ್ಯವೆಂದು ಹೆಸರು. ಆದ, ಉಳ್ಳ, ಇವು ಕ್ರಿಯೆಗಳೆಂದು ಸಂಕೇತ.

ಉ—ದಯಾಳುವಾದ ಶ್ರೀ ರಾಮನು ಜಟಾಯುವನ್ನು ತನ್ನ ಅಂಗೈಯಲ್ಲಿರಿಸಿಕೊಂಡು ಅದಕ್ಕೆ ಮೋಕ್ಷವನ್ನು ಕೊಟ್ಟನು.

(3) ಅನೇಕ ಪ್ರಧಾನವಾಕ್ಯಗಳನ್ನು ಉಳ್ಳ ಶಬ್ದ ಸಮುದಾಯಕ್ಕೆ ಸಂಯೋಜಿತ ವಾಕ್ಯವೆಂದು ಹೆಸರು. ಈ ಪ್ರಧಾನವಾಕ್ಯಗಳಲ್ಲಿ ಸಮ್ಮಿಶ್ರಿತವಾಕ್ಯಗಳೂ ಇರಬಹುದು.

ಉ—ತುರುಕರ ರಾಜ್ಯವು ಬಹು ದೊಡ್ಡದಾಗಿತ್ತು; ಆದರೆ ದೂರದೃಷ್ಟಿ ಕಡಮೆಯಾದ್ದರಿಂದ ಅವರ ಮಹಾರಾಜ್ಯವು ಖಿಲವಾಯಿತು.

೬. ಅಧೀನವಾಕ್ಯಗಳು ಮೂರು ವಿಧ

(1) ನಾಮಾತ್ಮಕ ಅಧೀನವಾಕ್ಯ.

ಇದು ಕರ್ತ್ರರ್ಥಕ ನಾಮಾತ್ಮಕ, ಕರ್ಮಾರ್ಥಕ ನಾಮಾತ್ಮಕ, ಎಂದು ಎರಡು ವಿಧ. ಇಂಥಾ ವಾಕ್ಯಗಳಲ್ಲಿ ಕ್ರಿಯಾನಾಮಗಳನ್ನು ಆಖ್ಯಾತವೆಂದು ತಿಳಿಯಬೇಕು.

ಉ—ದೀನರನ್ನು ಕಾಪಾಡುವುದು ನಮ್ಮ ಧರ್ಮವಾಗಿದೆ, ನೀತಿಯುಳ್ಳವರು ಲೋಕೋಪಕಾರಿಗಳು ಎಂಬುದನ್ನು ಎಲ್ಲರೂ ಬಲ್ಲರು.

(2) ಗುಣಾತ್ಮಕ ಅಧೀನವಾಕ್ಯ.

೭. ಇದು ಆಖ್ಯೆ ಅಥವಾ ಆಖ್ಯಾತ ಸಮಾಪಕವನ್ನು ವಿಶೇಷಿಸುವುದು. ಇಂಥಾ ವಾಕ್ಯಗಳಲ್ಲಿ ಕೃದ್ವಾಚಿ, ಕೃನ್ನಾಮಗಳನ್ನು ಆಖ್ಯಾತವೆಂದು ತಿಳಿಯಬೇಕು.

ಉ—ದೇಶವನ್ನು ಆಳುವವನು ಪ್ರಜೆಗಳೆಲ್ಲರನ್ನೂ ಒಂದೇ ಸಮನಾಗಿ ಕಾಣಬೇಕು.

ಇಲ್ಲಿ 'ದೇಶವನ್ನು ಆಳುವವನು ಪ್ರಜೆಗಳೆಲ್ಲರನ್ನೂ ಒಂದೇ ಸಮನಾಗಿ ಕಾಣಬೇಕು' ಎಂದು ಇದ್ದರೆ, 'ದೇಶವನ್ನು ಆಳುವ' ಎಂಬುದು 'ಅವನು' ಎಂಬ ಸರ್ವನಾಮವನ್ನು ವಿಶೇಷಿಸುವುದು.

(3) ಅವ್ಯಯಾತ್ಮಕ ಅಧೀನವಾಕ್ಯ.

೮. ಇದು ಆಖ್ಯಾತವನ್ನು ವಿಶೇಷಿಸುವುದು. ಇದಕ್ಕೆ ಕ್ರಿಯಾವಿಶೇಷಣಾತ್ಮಕ ಅಧೀನವಾಕ್ಯವೆಂದೂ ಹೆಸರು. ಇಂಥಾ ವಾಕ್ಯಗಳೂ ಅವ್ಯಯಗಳಂತೆಯೇ ಕಾಲ, ದೇಶ, ರೀತಿ, ಕಾರಣ, ಮುಂತಾದವುಗಳನ್ನು ತೋರಿಸುವವು. ಇಂಥಾ ವಾಕ್ಯಗಳಲ್ಲಿ ಕೃದ್ವಾಚಿಗಳನ್ನು ಆಖ್ಯಾತವೆಂದು ತಿಳಿಯಬೇಕು.

ಉ—ಕಾಲಕ್ಕೆ—ಚಕ್ರವರ್ತಿಯು ಇಲ್ಲಿಗೆ ಬಂದಿದ್ದಾಗ ಪ್ರಜೆಗಳಲ್ಲಿ ಬಹು ದಯವನ್ನು ತೋರಿಸಿದನು.

ದೇಶಕ್ಕೆ—ಶತ್ರುಗಳು ಹೋದಕಡೆ ರಾಮನ ಬಾಣವು ಹೋಗುತಿತ್ತು.

ರೀತಿಗೆ—ದೊಡ್ಡವರು ಹೇಳಿದ ಹಾಗೆ ಚಿಕ್ಕವರು ಕೇಳಬೇಕು-

ಫಲ—ಪಾಂಡವರು ಜೂಜಿನಲ್ಲಿ ಸೋತದ್ದರಿಂದ ಕೌರವರಿಗೆ ರಾಜ್ಯ ದೊರೆಯಿತು.

೯. ಸಂಯೋಜಿತ ವಾಕ್ಯಗಳಲ್ಲಿ ನಾಲ್ಕು ವಿಧಗಳುಂಟು.

(೧) ಅನುಕೂಲ ಸಂಬಂಧವಾಕ್ಯ.

ಉ—ಶ್ರೀರಾಮನು ಶತ್ರುಗಳನ್ನು ಶಿಕ್ಷಿಸುತಿದ್ದನು ಮತ್ತು ಶರಣಾಗತರನ್ನು ರಕ್ಷಿಸುತಿದ್ದನು.

(೨) ವಿರೋಧ ಸಂಬಂಧವಾಕ್ಯ.

ಉ—ಕಾಲ ಹೋಗುತ್ತೆ, ಆದರೆ ಮಾತು ಉಳಿಯುತ್ತೆ.

(೩) ಗೌಣಾರ್ಥಕ ಸಂಬಂಧವಾಕ್ಯ.

ಉ—ಕೆಟ್ಟವರು ಈ ಲೋಕದಲ್ಲಿ ಕಷ್ಟಪಡುವರು, ಅಥವಾ ಪರಲೋಕದಲ್ಲಿ ಕಷ್ಟಪಡುವರು.

(೪) ಹೇತ್ವರ್ಥಕ ಸಂಬಂಧವಾಕ್ಯ.

ಉ—ನಂದರು ಚಾಣಿಕ್ಯನಿಗೆ ಅಪಮಾನ ಮಾಡಿದರು, ಆದ್ದರಿಂದ ಅವರ ವಂಶವೇ ನಾಶವಾಯಿತು.

---

## ೨ ನೇ ಅಧ್ಯಾಯ

### ವಾಕ್ಯಾಂಗ ರೂಪಗಳು.

೧. ಆಖ್ಯೆಯು.

(1) ಒಂದು ಶಬ್ದವಾಗಿರಬಹುದು;

ಉ—ಭೂಮಿಯು ತಿರುಗುವುದು.

(2) ಒಂದು ವಚನವಾಗಿರಬಹುದು;

ಉ—ಭೂಮಿಯ ಗೋಳಾಕೃತಿಯು ಅದು ಉರುಳುವುದಕ್ಕೆ ಸಹಾಯ ಮಾಡುವುದು.
ಅರ್ಜುನನು ಪರಮೇಶ್ವರನಿಂದ ಪಾಶುಪತಾಸ್ತ್ರವನ್ನು ಪಡೆದು ಹೊರಟುಹೋದನು.

(3) ಒಂದು (ಅಧೀನ) ವಾಕ್ಯವಾಗಿರಬಹುದು;

ಉ—ಭೂಮಿ ಗುಂಡಾಗಿರುವುದು ಉರುಳುವಹಾಗೆ ಅದಕ್ಕೆ ಸಹಾಯ ಮಾಡುವುದು.

೨. ಆಖ್ಯಾತ ಸಮಾಪಕವು.

(1) ಒಂದು ಶಬ್ದವಾಗಿರಬಹುದು;

ಉ—ರಾಮನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದನು.

(2) ಒಂದು ವಚನವಾಗಿರಬಹುದು;

ಉ—ಕಾರೇಗಾರನು ಕೊನೆಯಿಂದ ಕೊನೆಗೆ ಅಳತೇ ಮಾಡಿದನು.

(3) ಒಂದು (ಅಧೀನ) ವಾಕ್ಯವಾಗಿರಬಹುದು;

ಉ—ಅರ್ಜುನನು ತನ್ನ ಬಂಧುಗಳನ್ನು ಕೈಯಿಂದ ಹೇಗೆ ಸಂಹರಿಸಲಿ ಎಂದು ಕೃಷ್ಣನನ್ನು ಕೇಳಿದನು.

೩. ಆಖ್ಯಾವಿಶೇಷಣ.

(1) ಒಂದು ಶಬ್ದವಾಗಿರಬಹುದು;

ಉ—ಒಳ್ಳೇಮಾತು ಲೋಕವನ್ನು ಗೆಲ್ಲುವುದು.

(2) ಒಂದು ವಚನವಾಗಿರಬಹುದು ;

ಉ—ಹರ ಹರಕು ವಿದ್ಯದ ಮನುಷ್ಯನು ಮಾನವನ್ನು ಸಂಪಾದಿಸಲಾರ.

ವಿಚಾರ—ವರ್ತಮಾನ ಅಥವಾ ಭೂತನ್ಯಾಸಗಳು ಕರ್ತೃಪದದ ವಿಶೇಷಣಗಳೆಂದು ಭಾವಿಸಬೇಕು

(3) ಒಂದು ವಾಕ್ಯವಾಗಿರಬಹುದು ;

ಉ—ವಿಶೇಷವಾಗಿ ದಯವನ್ನು ತೋರಿಸುವ ಮನುಷ್ಯನು ಬೇರೇ ಆನಂದವನ್ನು ಅಪೇಕ್ಷಿಸುವುದಿಲ್ಲ.

೪. ಆಖ್ಯಾತ ಸಮಾಪಕ ವಿಶೇಷಣ.

(1) ಒಂದು ಶಬ್ದವಾಗಿರಬಹುದು ;

ಉ—ಜಾಣ ಹುಡುಗರನ್ನು ಎಲ್ಲರೂ ಪ್ರೀತಿಸುವರು.

(2) ಒಂದು ವಚನವಾಗಿರಬಹುದು ;

ಉ—ಯಾವುದೂ ಯಜ್ಞೇಶ್ವರನ ಮಹಾಜ್ವಾಲೆಯನ್ನು ಜೈಸಲಾರದು.

(3) ಒಂದು (ಅಧೀನ) ವಾಕ್ಯವಾಗಿರಬಹುದು ;

ಉ— ಯಾವುದೂ ಯಜ್ಞೇಶ್ವರನಿಂದ ಹುಟ್ಟುವ ಮಹಾಜ್ವಾಲೆಯನ್ನು ಜೈಸಲಾರದು.

೫. ಆಖ್ಯಾತ ವಿಶೇಷಣವು.

(1) ಒಂದು ಶಬ್ದವಾಗಿರಬಹುದು;

ಉ—ಗಾಡಿಯು ಬೇಗ ಓಡುವುದು.

(2) ಒಂದು ವಚನವಾಗಿರಬಹುದು ;

ಉ—ಗಾಡಿಯು ಭರಭರನೆ ರಭಸದಿಂದ ಓಡುವುದು.

(3) ಒಂದು (ಅಧೀನ) ವಾಕ್ಯವಾಗಿರಬಹುದು ;

ಉ—ರಥವು ಭೂಮಿಯನ್ನು ನಡುಗಿಸುವ ಹಾಗೆ ಓಡುವುದು.

---

## ೩ ನೇ ಅಧ್ಯಾಯ.

### ಅಧೀನವಾಕ್ಯಗಳಿಗೆ ಬರುವ ಶಬ್ದ ಸಂಕೇತಗಳು.

೧ ನಾಮಾತ್ಮಕ ಅಧೀನವಾಕ್ಯದ ಆಚೆ ಸಾಧಾರಣವಾಗಿ 'ಎಂದು', 'ಎಂಬದಾಗಿ', 'ಎನ್ನುವುದಾಗಿ', 'ಎಂಬುವುದು', 'ಎನ್ನುವುದು', 'ಎಂತ', 'ಎಂತಲೂ', 'ಆಗಿಯೂ' ಮತ್ತು ಅಧಿನವಾಕ್ಯದ ಕ್ರಿಯಾನಾಮದ ಭೂತಭವಿಷ್ಯದ್ವರ್ತಮಾನ ರೂಪಗಳು, ಇವು ಸಂಕೇತವಾಗಿ ಬರುವವು.

ಉ—1. ಪಟವು ಮೇಲಕ್ಕೆ ಹಾರಿತು ಎಂದು ಹುಡುಗ ಕೂಗಿದನು.

2. ಸೇನೆಯವರು ಕೋಟೆ ಗೋಡೆಯನ್ನು ಕೆಡವಲಿ ಎಂಬದಾಗಿ ಸೇನಾಪತಿ ಆಜ್ಞಾಪಿಸಿದನು.

3. ದೇವರು ಜ್ಞಾನಾನಂದಮಯನಾಗಿದಾನೆನ್ನುವುದಾಗಿ ಮಹಾತ್ಮರು ಹೇಳುತಾರೆ.

4. ಸತ್ಯವು ನಮ್ಮನ್ನು ಕಡೆಹಾಯಿಸುವುದು ಎಂಬುದು ನಿಜ.

5. ಯೂರೋಪಿನ ಜನರು ಬುದ್ಧಿಶಾಲಿಗಳು ಎನ್ನುವುದು ಅವರ ಕೆಲಸದಿಂದ ತೋರುತ್ತೆ.
6. ತನ್ನ ಕೆಲಸವನ್ನು ತಾನು ಮಾಡುವುದು ಸುಖವಾಗಿರುವುದು.
7. ತನ್ನ ಕೆಲಸವನ್ನು ತಾನು ಮಾಡೋಣ ಉತ್ತಮವಾದ್ದು.

ಬಿಟ್ಟಿರುವ ಉದಾಹರಣೆಯನ್ನು ಊಹಿಸಿಕೊಳ್ಳಬಹುದು.

ಆಖ್ಯೆಗೂ ಆಖ್ಯಾತ ಸಮಾಪಕಕ್ಕೂ ನಾಮಾತ್ಮಕ ಅಧೀನ ವಾಕ್ಯದ ಶಬ್ದ ಸಂಕೇತಗಳು ಒಂದೇ ಆಗಿರುವವು.

೨. ಗುಣಾತ್ಮಕ ಅಧೀನವಾಕ್ಯದ ಕೊನೆಯಲ್ಲಿ ಸಾಧಾರಣವಾಗಿ 'ಅಂಥಾ' 'ಇಂಥಾ' ವರ್ತಮಾನ ಭೂತರೂಪಗಳ ಕೃದ್ವಾಚಿಗಳು—ಇವುಗಳು ಸಂಕೇತವಾಗಿ ಬರುವವು.

ಉ—1. ದೇವರನ್ನು ಕೊಂಡಾಡಿದಂಥಾ ಬಾಯಿಯಲ್ಲಿ ನರನನ್ನು ಕೊಂಡಾಡಬೇಡ.
2. ದೇವರನ್ನು ಕೊಂಡಾಡಿದ ಇಂಥಾ ಬಾಯಲ್ಲಿ ನರರನ್ನು ಕೊಂಡಾಡಬೇಡ.

ವರ್ತಮಾನ ಭೂತರೂಪಗಳ ಕೃದ್ವಾಚಿಯನ್ನು ಕೃನ್ನಾಮವಾಗಿ ಮಾಡುವುದುಂಟು; ಮತ್ತು ಕೃದ್ವಾಚಿಗಳ ಪರದಲ್ಲಿ ನಾಮವಾಚಕಗಳನ್ನು ಪ್ರಯೋಗಿಸುವುದುಂಟು.

ಉ—1. ಅಸತ್ಯವನ್ನು ನುಡಿಯದವನು ಧೀರನಾಗಿದಾನೆ.

2. ಅಸತ್ಯವನ್ನು ನುಡಿಯದ ಶ್ರೀರಾಮನು ಧೀರನಾಗಿದಾನೆ.

ಅಂಥಾ ಕೃದ್ವ್ಯಾಚಿಯು ತರುವಾಯು ಭಿನ್ನ ವಚನಗಳೂ ಭಿನ್ನ ಲಿಂಗಗಳೂ ಸಹಾ ಬರಬಹುದು.

೪ ಕ್ರಿಯಾ ವಿಶೇಷಣಾತ್ಮಕ ಅಧೀನ ವಾಕ್ಯಗಳ ಕೊನೆಯಲ್ಲಿರುವ ಸಂಕೇತಗಳು ಯಾವವೆಂದರೆ:—

ಕಾಲಕ್ಕೆ—'ಆಗ', 'ಯಾವಾಗಲೋ ಆಗ'

ಉ—1. ಗೋವಿಂದ ಭಗವಾನರು ಇದ್ದಾಗ ವಿಕ್ರಮಾರ್ಕ ಆಳುತಿದ್ದನೆಂದು ಕೆಲವರು ಹೇಳುವರು.

2. ಯಾವಾಗ ಶಂಕರಾಚಾರ್ಯರು ಇದ್ದರೋ ಆಗ ಗೋವಿಂದಭಗವಾನರೂ ಇದ್ದರು.

ಸ್ಥಳಕ್ಕೆ—'ಎಲ್ಲಿ', 'ಅಲ್ಲಿ', 'ಎಲ್ಲಿಯೋ ಅಲ್ಲಿ' 'ಯಾವ ಸ್ಥಳದಲ್ಲಿ.'

ಉ—1. ಹೈದರಲ್ಲಿಯನ್ನು ಹೂಳಿದ ಕಡೆಯಲ್ಲಿ ಟಿಪ್ಪುವನ್ನೂ ಹೂಳಿದರು.

2. ಎಲ್ಲಿ ಒಡವೆ ಹೋಯಿತೋ ಅಲ್ಲಿ ಹುಡುಕಬೇಕು.

ರೀತಿ—'ಹಾಗೆ', 'ಹೇಗೋ ಹಾಗೆ', 'ಅಂತೆ'.

1. ತಾಯಿ ತಂದೆ ಹೇಳಿದ ಹಾಗೆ ಮಕ್ಕಳು ಕೇಳಬೇಕು.

2. ತಾಯಿ ತಂದೆ ಹೇಗೆ ಹೇಳುತಾರೆಯೋ ಹಾಗೆ ಮಕ್ಕಳು ಕೇಳಬೇಕು.

3. ದೊಡ್ಡವರು ನಡೆದಂತೆ ಚಿಕ್ಕವರು ನಡೆಯ ಬೇಕು.

ಸಮಯ—'ರೆ', 'ಒಡೆ'.

1. ಚೆನ್ನಾಗಿ ಓದಿದರೆ ಚೆನ್ನಾಗಿ ಬದುಕುವರು.
2. ರಾಜರು ವಿವೇಕಿಗಳಾಗಿದ್ದೊಡೆ ಪ್ರಜೆಗಳು ಸುಖ ಪಡುವರು.

ಅಂಗೀಕಾರ—'ಆಗ್ಯೂ', 'ರೂ'.

ಉ—1. ಬಲವಾದ ಕೋಟೆಗಳನ್ನು ಕಟ್ಟಿಕೊಂಡಾಗ್ಯೂ ಈ ಕಾಲದ ಯುದ್ಧದಲ್ಲಿ ಪ್ರಯೋಜನವಿಲ್ಲ.
2. ಕೆಟ್ಟವರಿಗೆ ಎಷ್ಟು ಬುದ್ಧೀ ಹೇಳಿದರೂ ಅವರು ಕೇಳುವುದಿಲ್ಲ.

ಕಾರ್ಯಕಾರಣ—'ಇಂದ', 'ಕಾರಣ'.

ಉ—1. ಮಹಾತ್ಮರು ಆಗಾಗ್ಗೆ ಧರ್ಮವನ್ನು ಬೋಧಿಸುತಾ ಬಂದುದರಿಂದ ದೈವಭಕ್ತಿಯು ಇನ್ನೂ ಉಳಿದಿದೆ.
2. ನಮ್ಮ ತಾಯಿತಂದೆಗಳು ನಮ್ಮನ್ನು ಕಾಪಾಡಿದ ಕಾರಣ ನಾವು ಬದುಕಿದೆವು.

---

# ೪ ನೇ ಅಧ್ಯಾಯ.

## ವಾಕ್ಯ ಭಾಗಗಳ ಪರ್ಯಾಯ ಶಬ್ದಗಳು.

### ಸ್ಥಾನಭೇದ.

೧. ವಾಕ್ಯಭಾಗಗಳಿಗೆ ಪ್ರತಿಯಾಗಿ ಅರ್ಥ ಕೆಡ ದಂತೆ ಬೇರೇ ಸಮಾನಾರ್ಥಕ ಪರ್ಯಾಯ ಶಬ್ದಗಳನ್ನು ಬರೆಯುವುದುಂಟು. ಹೀಗೆ ಮಾಡುವುದರಲ್ಲಿ ಅರ್ಥ ಕೆಡಕೂಡದೆಂಬುದೇ ವಿಧಿ.

ಉ—1. ಹಿಂದುಸ್ಥಾನದಲ್ಲಿ ಚಕ್ರವರ್ತಿಗಳೆನ್ನಿಸಿಕೊಂಡಿದ್ದ ಮೊಗಲರು ಆ ಕಾಲದ ಎಲ್ಲಾ ದೇಶದ ದೊರೆಗಳಲ್ಲಿಯೂ ಮುಖಂಡರೆನ್ನಿಸಿಕೊಂಡಿದ್ದರು.

ಕೆಳಗೆ ಗೀಟಹಾಗಿರುವ ಭಾಗವನ್ನು ಆದೇಶ ಮಾಡಿ ಬರೆಯೋಣ.

"ಹಿಂದುಸ್ಥಾನದಲ್ಲಿ ರಾಜಾಧಿರಾಜರೆಂದು ಕರೆಯಿಸಿಕೊಳ್ಳುತಿದ್ದ ಮೊಗಲರು ಅವರ ಸಮಕಾಲಿಕರಾದ ಅನ್ಯದೇಶದ ರಾಜರುಗಳೆಲ್ಲರಿಗಿಂತಲೂ ಶ್ರೇಷ್ಠರೆಂದು ಹೊಗಳಿಸಿಕೊಳ್ಳುತಿದ್ದರು."

ಉ—2. ನಾನಾಫರ್ನವೀಸನು ಎಂದಿನಂತೆ ರಾಜ್ಯದ ವಿಚಾರವನ್ನು ಕ್ರಮವಾಗಿ ನೋಡುತಾ ಇಂಗ್ಲಿಷರ ಸಬ್‌ಸಿಡಿಯರಿ ಸಂಬಂಧಕ್ಕೆ ಒಪ್ಪದೆ ತನ್ನ ದೇಶವನ್ನೂ ದೊರೆಯನ್ನೂ ಇವರ ವಶಮಾಡದೆ ಸ್ವತಂತ್ರವಾಗಿ ಆಳುತಿದ್ದನು.

ಆ ದೇಶವಾಗಿ ಬರೆಯುವುದಕ್ಕೆ:—

"ನಾನಾಫರ್ನವೀಸನು ಪೂರ್ವದಹಾಗೆಯೇ ರಾಜ್ಯದ ಆಡಳತಗಳನ್ನು ಸರಿಯಾಗಿ ಮಾಡುತಾ ಸಬ್‌ಸಿಡಿಯರಿ ಕೌಲಿಗೆ

ಅಂಗೀಕಾರ ಮಾಡದೆ ತನ್ಮೂಲಕ ಮರಾಟೀ ಸೀಮೆಯನ್ನೂ ರಾಜನನ್ನೂ ಇಂಗ್ಲಿಷರಿಗೆ ಒಪ್ಪಿಸದೆ ಯಾರ ಹಂಗಿಗೂ ಸಿಕ್ಕದ ಹಾಗೆ ರಾಜ್ಯಭಾರ ಮಾಡುತಿದ್ದನು''

೨. ವಾಕ್ಯಭಾಗಗಳನ್ನು ಅರ್ಥ ಕೆಡದಂತೆ ಸ್ಥಾನಭೇದ ಮಾಡುವುದೂ ಉಂಟು.

ಉ—1. ಎಲ್ ಫಿನ್ಸ್ಟನ್ನನು ಬೊಂಬಾಯಿಗೆ ಗವರ್ನ ರಾಗಿ ಬಂದು ಭೂಮಿಗಳನ್ನು ಆಗಾಗ್ಗೆ ಗುತ್ತಿಗೆಗೂ ವಾರಕ್ಕೂ ಸುಲಭವಾಗಿ ಕೊಡುತಾ ಜನರಿಗೆ ಸೌಖ್ಯವುಂಟಾಗುವಂತೆಯೂ ಭಂಡಾರಕ್ಕೆ ಹಣ ಸೇರುವಂತೆಯೂ ಅನೇಕವಾದ ಒಳ್ಳೇ ಕೆಲಸ ಗಳನ್ನು ಮಾಡಿದನು.

ಸ್ಥಾನ ಭೇದಕ್ಕೆ

ಬೊಂಬಾಯಿಗೆ ಗವರ್ನರಾಗಿ ಬಂದು ಜನರಿಗೆ ಸೌಖ್ಯ ಉಂಟಾಗುವಂತೆಯೂ ಭಂಡಾರಕ್ಕೆ ಹಣ ಸೇರುವಂತೆಯೂ ಭೂಮಿಗಳನ್ನು ಗುತ್ತಿಗಗೂ ವಾರಕ್ಕೂ ಸುಲಭವಾಗಿ ಆಗಾಗ್ಗೆ ಕೊಡುತಾ ಎಲ್ ಫಿನ್ಸ್ಟನ್ನನು ಅನೇಕ ಒಳ್ಳೇ ಕೆಲಸಗಳನ್ನು ಮಾಡಿದನು.

ಉ—ಪೂರ್ವದಂತೆಯೇ ನನ್ನ ಸಂಗಡ ಸಲಿಗೆಯಾಗಿ ಮಾತನಾಡಿಕೊಂಡಿರುವ ತನಕ ನನ್ನ ಮನಸ್ಸು ಸಮಾಧಾನ ವಾಗಿರುವುದು.

ಸ್ಥಾನ ಭೇದಕ್ಕೆ

''ನನ್ನ ಸಂಗಡ ಪೂರ್ವದಂತೆಯೇ ಸಲಿಗೆಯಾಗಿ ಮಾತ ನಾಡಿಕೊಂಡಿರುವ ತನಕ ನನ್ನ ಮನಸ್ಸು ಸಮಾಧಾನವಾಗಿ ರುವುದು.''

# ೫ ನೇ ಅಧ್ಯಾಯ

## ವಾಕ್ಯ ವಿಭಜನೆ

೧. ಒಂದು ವಾಕ್ಯದಲ್ಲಿ ಆಖ್ಯೆ, ಆಖ್ಯಾತ, ಆಖ್ಯಾತ ಸಮಾಪಕ, ಆಖ್ಯಾ ವಿಶೇಷಣ, ಆಖ್ಯಾತ ವಿಶೇಷಣ, ಆಖ್ಯಾತ ಸಮಾಪಕ ವಿಶೇಷಣ, ಇವುಗಳನ್ನು ವಿಂಗಡಿಸಿ ಬೇರೆ ಬೇರೇ ಬರೆದು ವಾಕ್ಯದ ಹೆಸರನ್ನು ಬರೆಯುವುದಕ್ಕೆ ವಾಕ್ಯವಿಭಜನೆ ಎಂದು ಹೆಸರು.

I ಸಾಮಾನ್ಯ ವಾಕ್ಯಕ್ಕೆ.

| ವಾಕ್ಯದ ಸಂಖ್ಯೆ | ವಾಕ್ಯ | ವಾಕ್ಯದ ಹೆಸರು | ಆಖ್ಯೆ | | ಆಖ್ಯಾತ | | ಆಖ್ಯಾತ ಸಮಾಪಕ | |
|---|---|---|---|---|---|---|---|---|
| | | | ಕರ್ತೃ | ಅದರ ವಿಶೇಷಣ | ಕ್ರಿಯೆ | ಅದರ ವಿಶೇಷಣ | ಕರ್ಮ | ಅದರ ವಿಶೇಷಣ |
| ೧ | ನೀರು ಲೋಕವನ್ನು ಕಾಪಾಡುವುದು | ಸಾಮಾನ್ಯ ವಾಕ್ಯ | ನೀರು | | ಕಾಪಾಡುವುದು | | ಲೋಕವನ್ನು | |
| ೨ | ಸೂರ್ಯನ ರಶ್ಮಿಯು ಏಳು ಬಣ್ಣದ ಕಿರಣಗಳನ್ನು ವಿಚಿತ್ರವಾಗಿ ಒಳಗೊಂಡಿದೆ. | ಸಾಮಾನ್ಯ ವಾಕ್ಯ | ರಶ್ಮಿಯು | ಸೂರ್ಯನ | ಒಳಗೊಂಡಿದೆ | ವಿಚಿತ್ರವಾಗಿ | ಕಿರಣಗಳನ್ನು | ಏಳು ಬಣ್ಣದ |

II ಸಮ್ಮಿಶ್ರಿತವಾಕ್ಯ ವಿಭಜನೆ ಎರಡು ವಿಧ. ೧ ಪ್ರಧಾನ ವಾಕ್ಯವನ್ನು ವಿಭಜನೆ ಮಾಡುವಾಗ ಅಧೀನ ವಾಕ್ಯಗಳನ್ನು ಅವುಗಳ ಸ್ಥಾನದಲ್ಲಿ ಉಂಡೆಯಾಗಿ ವಿಭಜನೆಮಾಡಿ ತೋರಿಸುವುದು.

೨. ಮೊದಲು ಪ್ರಧಾನ ವಾಕ್ಯವನ್ನೂ ಅಧೀನ ವಾಕ್ಯಗಳನ್ನೂ ಮೇಲೆ ಕಂಡಂತೆ ತೋರಿಸಿ ತರುವಾಯ ಅಧೀನವಾಕ್ಯಗಳನ್ನು ಬೇರೆ ಬೇರೇ ವಿಭಜನೆ ಮಾಡುವುದು. ಹೇಗಂದರೆ:— ೧ಕ್ಕೆ.

| ವಾಕ್ಯ ಸಂಖ್ಯೆ | ವಾಕ್ಯ | ವಾಕ್ಯದ ಹೆಸರು | ಆಖ್ಯೆ | | ಆಖ್ಯಾತ | | ಆಖ್ಯಾತ ಸಮಾಪಕ | |
|---|---|---|---|---|---|---|---|---|
| | | | ಕರ್ತೃ | ಅದರ ವಿಶೇಷಣ | ಕ್ರಿಯೆ | ಅದರ ವಿಶೇಷಣ | ಕರ್ಮ | ಅದರ ವಿಶೇಷಣ |
| ೧ | ತಾನು ಮಾಡಿದ ಕೆಲಸ ಇಷ್ಟರಮಟ್ಟಿಗೆ ಸಾಗಿತಲ್ಲಾ, ತನ್ನನ್ನು ಯಾರೂ ಏನನ್ನೂ ಮಾಡಲಿಲ್ಲವಲ್ಲಾ, ಎಂದು ಧೈರ್ಯದಿಂದ ಎದೆಯನ್ನು ಇನ್ನೂ ಕಲ್ಲುಮಾಡಿಕೊಂಡು ಮುಂದಕ್ಕೆ ನಡೆದನು. | ಸಮ್ಮಿಶ್ರಿತ ವಾಕ್ಯ | (ಅವನು ಅಧ್ಯಾಹಾರ) | ಎದೆಯನ್ನು ಇನ್ನೂ ಕಲ್ಲು ಮಾಡಿ ಕೊಂಡು | ನಡೆದನು | ಮುಂದಕ್ಕೆ, ತಾನು ಮಾಡಿದ ......... ಧೈರ್ಯದಿಂದ | | |

೨ ಕ್ಕೆ.

| ವಾಕ್ಯ ಸಂಖ್ಯೆ | ವಾಕ್ಯ | ವಾಕ್ಯದ ಹೆಸರು | ಆಖ್ಯೆ | | ಆಖ್ಯಾತ | | ಆಖ್ಯಾತ ಸಮಾಪಕ | |
|---|---|---|---|---|---|---|---|---|
| | | | ಕರ್ತೃ | ಅದರ ವಿಶೇಷಣ | ಕ್ರಿಯೆ | ಅದರ ವಿಶೇಷಣ | ಕರ್ಮ | ಅದರ ವಿಶೇಷಣ |
| ೧ | ಅವನು ಧೈರ್ಯದಿಂದ ಎದೆಯನ್ನು ಇನ್ನೂ ಕಲ್ಲು ಮಾಡಿಕೊಂಡು ಮುಂದಕ್ಕೆ ನಡೆದನು. | ಸಮ್ಮಿಶ್ರಿತ ಪ್ರಧಾನ ವಾಕ್ಯ | ಅವನು (ಅಧ್ಯಾಹಾರ) | ಎದೆಯನ್ನು ಇನ್ನೂ ಕಲ್ಲು ಮಾಡಿ ಕೊಂಡು | ನಡೆದನು | ಮುಂದಕ್ಕೆ, ಧೈರ್ಯದಿಂದ | | |

| | | | | | | | | | |
|---|---|---|---|---|---|---|---|---|---|
| ೧/1 | ಕೆಲಸ ಇಷ್ಟರಮಟ್ಟಿ ಸಾಗಿತಲ್ಲಾ | ಗುಣಾತ್ಮಕ ಅಧೀನವಾಕ್ಯ ೧ರಲ್ಲಿ ಧೈರ್ಯಕ್ಕೆ ವಿಶೇಷಣ | ಕೆಲಸ | | ಸಾಗಿತಲ್ಲಾ | ಇಷ್ಟರ ಮಟ್ಟಿಗೆ | | | |
| ೧/2 | ತಾನು ಮಾಡಿದ | ೧/1 ರಲ್ಲಿ 'ಕೆಲಸ'ಕ್ಕೆ ಗುಣಾತ್ಮಕ ಅಧೀನವಾಕ್ಯ | ತಾನು | | ಮಾಡಿದ | | | | |
| ೧/3 | ತನ್ನನ್ನು ಯಾರೂ ಏನೂ ಮಾಡಲಿಲ್ಲವಲ್ಲಾ | ಗುಣಾತ್ಮಕ ಅಧೀನವಾಕ್ಯ ೧ರಲ್ಲಿ 'ಧೈರ್ಯ'ಕ್ಕೆ ವಿಶೇಷಣ | ಯಾರೂ | | ಮಾಡಲಿಲ್ಲ ವಲ್ಲಾ | | ಏನೂ, ತನ್ನನ್ನು | | |

## III ಸಂಯೋಜಿತವಾಕ್ಯಕ್ಕೆ.

೩. ಸಂಯೋಜಿತವಾಕ್ಯ ವಿಭಜನೆಯಲ್ಲಿ ಸಾಮಾನ್ಯ ವಾಕ್ಯವಿದ್ದರೆ ಅದರ ವಿಭಜನಾ ವಿಧಿಯನ್ನೂ ಸಮ್ಮಿಶ್ರಿತವಾಕ್ಯ ವಿದ್ದರೆ ಅದರ ವಿಭಜನಾ ವಿಧಿಯನ್ನೂ ಅನುಸರಿಸಬೇಕು.

| ವಾಕ್ಯ ಸಂಖ್ಯೆ | ವಾಕ್ಯ | ವಾಕ್ಯದ ಹೆಸರು | ಆಖ್ಯೆ | | ಆಖ್ಯಾತ | | ಆಖ್ಯಾತ ಸಮಾಪಕ | |
|---|---|---|---|---|---|---|---|---|
| | | | ಕರ್ತೃ | ಅದರ ವಿಶೇಷಣ | ಕ್ರಿಯೆ | ಅದರ ವಿಶೇಷಣ | ಕರ್ಮ | ಅದರ ವಿಶೇಷಣ |
| ೧ | ಒಬ್ಬರಾದರೂ ಒಂದು ದಿನವಾದರೂ ಸುಲೇಮಾನನ ಸಂಗಡ ಒಂದು ಮಾತನ್ನೂ ಆಡುತಿರಲಿಲ್ಲ | ಪ್ರಧಾನವಾಕ್ಯ, ಸಮ್ಮಿಶ್ರಿತ | ಒಬ್ಬರಾದರೂ | | ಆಡುತಿರಲಿಲ್ಲ. | ಒಂದುದಿನವಾದರೂ | ಮಾತನ್ನೂ, ಸುಲೇಮಾನನ ಸಂಗಡ | ಒಂದು |
| ೧೧ | ಆದಾರಿಯಲ್ಲಿ ಅಷ್ಟೊಂದು ಜನ ತಿರುಗಾಡುತಿದ್ದಾಗ್ಯೂ | ೧ಕ್ಕೆ ಅಂಗೀಕಾರಾರ್ಥಕ ಕ್ರಿಯಾ ವಿಶೇಷಣ ವಾಕ್ಯ | ಜನ | ಅಷ್ಟೊಂದು | ತಿರುಗಾಡುತಿದ್ದಾಗ್ಯೂ | ಆ ದಾರಿಯಲ್ಲಿ | | |

| | | | | | | | |
|---|---|---|---|---|---|---|---|
| ೨ | ಆದರೆ ಮುಲ್ತಾನಿ ಸಾಹುಕಾರನ ಮಗ ಮಾತ್ರ, ಮಠಕ್ಕೆ ಹೋಗುತಾ ಬರುತಾ ದಾರಿಯಲ್ಲಿ ಸುಲೇಮಾನನ ಹತ್ತರ ಸ್ವಲ್ಪಹೊತ್ತು ನಿಂತು ಅವನ ಸಂಗಡ ನಾಲ್ಕು ಮಾತನಾಡಿ ಹೋಗುತಿದ್ದನು. | ವಿರೋಧ ಸಂಬಂಧ, ಸಂಯೋಜಿತ ವಾಕ್ಯ | ಮಗ | ಮುಲ್ತಾನಿ ಸಾಹುಕಾರನ, ಮಠಕ್ಕೆ ಹೋಗುತಾ ಬರುತಾ ದಾರಿಯಲ್ಲಿ ಸುಲೇಮಾನನ ಹತ್ತರ ಸ್ವಲ್ಪ ಹೊತ್ತು ನಿಂತು ಅವನ ಸಂಗಡ ನಾಲ್ಕು ಮಾತನಾಡಿ | ಹೋಗುತಿದ್ದನು | ಮಾತ್ರ | |

## ೬ ನೇ ಅಧ್ಯಾಯ.

### ವಾಕ್ಯಸಂಯೋಜನೆ.

೧ ವಾಕ್ಯಗಳ ಬೇರೆ ಬೇರೆ ಅಂಗಗಳನ್ನು ಬೇರೆ ಬೇರೇ ಬಿಡಿಸಿ ವಾಕ್ಯಗಳಾಗಿ ಬರೆದಿದ್ದರೆ, ಅವುಗಳೆಲ್ಲವನ್ನೂ ಒಟ್ಟಿಗೆ ಸೇರಿಸಿ ವಾಕ್ಯವಾಗಿ ಬರೆಯುವುದಕ್ಕೆ ವಾಕ್ಯಸಂಯೋಜನೆ ಎಂದು ಹೆಸರು.

I. ಸಾಮಾನ್ಯವಾಕ್ಯ ಮಾಡುವುದು.

೨ ಇದರಲ್ಲಿ ಒಂದೇ ಒಂದು ಕರ್ತೃ ಒಂದೇ ಒಂದು ಕ್ರಿಯೆ ಇರಬೇಕು. ಮಿಕ್ಕ ಕರ್ತೃಕ್ರಿಯೆಗಳು ಇಲ್ಲದಹಾಗೆ ಬರೆಯಬೇಕು. ಕರ್ತೃಕ್ರಿಯೆಗಳನ್ನೂ ಕರ್ಮಪದವಿದ್ದರೆ ಅದನ್ನೂ ಮೊದಲು ಚುನಾಯಿಸಿಕೊಳ್ಳಬೇಕು. ಇದಕ್ಕೆ ಕೆಲವು ನಿಬಂಧನೆಗಳುಂಟು.

(೧) ವಾಕ್ಯದಲ್ಲಿ ಕಾಲವನ್ನು ಮೊದಲು ತೋರಿಸಬೇಕು.

(೨) ತರುವಾಯ ಸ್ಥಳವನ್ನು ತೋರಿಸಬೇಕು.

(೩) ಅರ್ಥವನ್ನು ಅನುಸರಿಸಿ ಕೆಲವು ವಾಕ್ಯಗಳನ್ನು ನ್ಯೂನರೂಪಗಳಲ್ಲಿಡಬೇಕು.

(೪) ಸಮಾನಾರ್ಥವುಳ್ಳ ಕರ್ತೃ, ಕರ್ಮ, ಕ್ರಿಯೆ, ಇವುಗಳ ವಿಶೇಷಣಗಳು, ಇವುಗಳನ್ನು ಅರ್ಥಾನುಸಾರವಾಗಿ ಅವ್ಯಯಗಳಿಂದ ಸೇರಿಸಬೇಕು.

(೫) ಸಮಾನಾರ್ಥವುಳ್ಳ ಕರ್ತೃಕರ್ಮಗಳನ್ನೂ ಅವುಗಳ ವಿಶೇಷಣಗಳನ್ನೂ ಸಮಾಸಮಾಡಿ ಜೋಡಿಸಬಹುದು.

(೭) ಅರ್ಥ ಕೆಡದಹಾಗೆ ಅಗತ್ಯವಾದ ರೂಪ ಭೇದಗಳನ್ನೂ ಅವ್ಯಯಗಳನ್ನೂ ಉಪಯೋಗಿಸ ಬಹುದು.

(೭) ಅಗತ್ಯವಿದ್ದರೆ ಒಂದು ಶಬ್ದದಿಂದ ಒಂದು ವಾಕ್ಯದ ಅರ್ಥವನ್ನು ತೋರಿಸಬಹುದು.

(೮) ಕ್ರಿಯೆ ಇಲ್ಲದ ಒಂದು ವಚನದಿಂದ ಒಂದು ವಾಕ್ಯದ ಅರ್ಥವನ್ನು ತೋರಿಸಬಹುದು.

(೯) ಅರ್ಥವನ್ನು ವಿಶದಮಾಡುವುದಕ್ಕೆ ಅಗತ್ಯ ವಾದ ಬೇರೇ ಶಬ್ದವನ್ನು ಪ್ರಯೋಗಿಸಬಹುದು.

(೧೦) ಅಗತ್ಯವಿಲ್ಲದ ಶಬ್ದವನ್ನು ಪ್ರಯೋಗಿಸ ಕೂಡದು.

## ಉದಾಹರಣೆ.

1. ಮೊದಲಿಂದಲೂ ಇತರರ ಮನೆಯಲ್ಲಿ ದುಡಿಯು ತ್ತಿದ್ದಳು—"ದುಡಿಯುತಿದ್ದಳು" ಇದನ್ನು ನ್ಯೂನ ರೂಪವಾಗಿ ಮಾಡು.
2. ಮಾತೃವನ್ನು ಸಂರಕ್ಷಣೆ ಮಾಡುತಿದ್ದರು:— ಕ್ರಿಯೆಯನ್ನು ಬಿಡು.
3. ಪಿತೃವನ್ನು ಸಂರಕ್ಷಣೆ ಮಾಡುತಿದ್ದಳು:— "ಪಿತೃ ವನ್ನು" ಇದನ್ನು 2 ರಲ್ಲಿರುವ ಮಾತೃವಿಗೆ ಸೇರಿಸಿ ಸಮಾಸಮಾಡು. ಅಥವಾ ಮಾತೃ ಪಿತೃ ಇವುಗಳ ದ್ವಿತೀಯರೂಪಕ್ಕೆ ಸಮುಚ್ಚಯವನ್ನು ಸೇರಿಸು.

'ಅವಳು' ಅಧ್ಯಾಹಾರವಾಗಿರುವ ಕರ್ತೃ ವೆಂದು ತಿಳಿ. 2 ರಲ್ಲಿರುವ 'ಸಂರಕ್ಷಣೆ ಮಾಡು ತಿದ್ದಳು' ಇದನ್ನು ಕ್ರಿಯೆಯಾಗಿ ಮಾಡಿಕೊ. ಇದೆಲ್ಲ ವನ್ನೂ ಜೋಡಿಸು.

(1) { ಅವಳು ಮೊದಲಿಂದಲೂ ಇತರರ ಮನೆಯಲ್ಲಿ ದುಡಿದು

(2) ಮಾತೃವನ್ನೂ

(3) ಪಿತೃವನ್ನೂ ಸಂರಕ್ಷಣೆ ಮಾಡುತಿದ್ದಳು.

"ಅವಳು ಮೊದಲಿಂದಲೂ ಇತರರ ಮನೆಯಲ್ಲಿ ದುಡಿದು ಮಾತೃವನ್ನೂ ಪಿತೃವನ್ನೂ (ಮಾತಾಪಿತೃಗಳನ್ನು) ಸಂರಕ್ಷಣೆ ಮಾಡುತಿದ್ದಳು."

ಈ ವಾಕ್ಯವೇ ಉತ್ತರವಾಗಿದೆ.

## II. ಸಮ್ಮಿಶ್ರಿತವಾಕ್ಯ

ಸಾಮಾನ್ಯ ವಾಕ್ಯಗಳ ಸಂಯೋಜನಕ್ಕೆ ಬರೆದಿರುವ ನಿಬಂಧನೆಗಳು ಸಮ್ಮಿಶ್ರಿತವಾಕ್ಯಗಳ ಸಂಯೋಜನಕ್ಕೂ ವ್ಯಾಪಿಸುವವು. ಆ ನಿಬಂಧನೆಗಳೂ ಅಲ್ಲದೆ ಕೆಲವು ವಿಶೇಷ ನಿಬಂಧನೆಗಳುಂಟು. ಹೇಗೆಂದರೆ:—

(೧) ಒಂದು ಮುಖ್ಯಾರ್ಥವುಳ್ಳ ವಾಕ್ಯವನ್ನು ಪ್ರಧಾನವಾಕ್ಯವಾಗಿ ಇಟ್ಟುಕೊಳ್ಳುವುದು.

(೨) ಉಳಿದ ವಾಕ್ಯಗಳಲ್ಲಿ ಅರ್ಥವನ್ನು ಸಾಧ್ಯವಾದರೆ ಒಂದು ಶಬ್ದದಿಂದ ತೋರಿಸುವುದು.

(೩) ಉಳಿದ ವಾಕ್ಯಗಳಲ್ಲಿ ಅರ್ಥವನ್ನು ಸಾಧ್ಯವಾದರೆ ಕ್ರಿಯೆ ಇಲ್ಲದ ವಚನದಿಂದ ತೋರಿಸುವುದು.

(೪) ಉಳಿದ ವಾಕ್ಯಗಳನ್ನು ಅರ್ಥಾನುಸಾರ ಅಧೀನವಾಕ್ಯವಾಗಿ ಮಾಡುವುದು.

(೫) ಇವುಗಳನ್ನು ಅನ್ವಯ ಕ್ರಮದಲ್ಲಿ ಜೋಡಿಸುವುದು.

(೬) ಇದರಲ್ಲಿ ಒಂದು ಅಧೀನವಾಕ್ಯವಾದರೂ ಇರಲೇಬೇಕು.

(೭) ಹೆಚ್ಚಾದ ಅಧೀನವಾಕ್ಯವಿದ್ದರೆ ದೋಷ ವಿಲ್ಲ.

ಉ ದಾ ಹ ರ ಣೆ.

1. ಅಲ್ಲಿ ಜನರು ದೂರವಾಗಿ ನಿಂತಿದ್ದರು—
'ಅಲ್ಲಿ ದೂರವಾಗಿ ನಿಂತಿದ್ದರು' ಇದನ್ನು ಕೃದ್ವಾಚಿ ಮಾಡಿ ಅದಕ್ಕೆ ' ಅಂಥಾ ' ಸೇರಿಸು. ಇದನ್ನು ' ಜನರು ' ಎನ್ನುವ್ರದಕ್ಕೆ ವಿಶೇಷಣವಾಗಿರಿಸು.
2. ಅವರು ಸುಮತಿಯ ಧೈರ್ಯವನ್ನು ನೋಡಿದರು—
' ಸುಮತಿಯ ಧೈರ್ಯವನ್ನು ನೋಡಿದ ಮೇಲೆ ' ಎಂದು ಬರೆ.
3. ಆ ಜನರು ಸುಮತಿಯುನ್ನು ಕೊಂಡಾಡಿದರು—
' ಸುಮತಿಯುನ್ನು ಕೊಂಡಾಡಿದರು ' ಇದನ್ನು ಪ್ರಧಾನವಾಕ್ಯವಾಗಿ ಮಾಡಿಕೊ.

ಹೀಗೆ ಮಾಡುವುದರಿಂದ ಕೆಳಗಿನ ವಾಕ್ಯ ವಾಗುವುದು:—

" ಅಲ್ಲಿ ದೂರವಾಗಿ ನಿಂತಿದ್ದಂಥಾ ಆ ಜನರು ಸುಮತಿಯ ಧೈರ್ಯವನ್ನು ನೋಡಿದ ಮೇಲೆ ಅವನನ್ನು ಕೊಂಡಾಡಿದರು. "

## III. ಸಂಯೋಜಿತವಾಕ್ಯ

ಸಾಮಾನ್ಯ ವಾಕ್ಯಗಳು ಮತ್ತು ಸಮ್ಮಿಶ್ರಿತ ವಾಕ್ಯಗಳು ಇವುಗಳ ಸಂಯೋಜನಕ್ಕೆ ಬರೆದಿರುವ ನಿಬಂಧನೆಗಳು ಸಂಯೋಜಿತ ವಾಕ್ಯಗಳನ್ನು ಸಂಯೋಜನ ಮಾಡುವುದಕ್ಕೆ ವ್ಯಾಪಿಸುವವು. ಆ ನಿಬಂಧನೆಗಳಲ್ಲದೆ ಕೆಲವು ವಿಶೇಷ ನಿಬಂಧನೆಗಳುಂಟು. ಹೇಗೆಂದರೆ:—

(೧) ಸ್ವತಂತ್ರವಾಗಿ ಅರ್ಥಕೊಡುವಂಥಾ ವಾಕ್ಯಗಳನ್ನು ಒಂದಕ್ಕಿಂತಲೂ ಹೆಚ್ಚಾಗಿ ಆರಿಸಿಕೊಳ್ಳಬೇಕು.

(೨) ಆಯಾ ವಾಕ್ಯಗಳಿಗೆ ಸಂಬಂಧಿಸುವ ಶಬ್ದಗಳು, ವಚನಗಳು, ಅಧೀನವಾಕ್ಯಗಳು, ಇವುಗಳನ್ನು ಬೇರೆಬೇರೇ ತೆಗೆದು ಆಯಾ ಸಾಮಾನ್ಯ ವಾಕ್ಯಗಳನ್ನೂ, ಸಮ್ಮಿಶ್ರಿತ ವಾಕ್ಯಗಳನ್ನೂ, ವಿಂಗಡಿಸಿಕೊಳ್ಳಬೇಕು.

(೩) ಹೀಗೆ ವಿಂಗಡಿಸಿಕೊಂಡ ಸಾಮಾನ್ಯ ವಾಕ್ಯಗಳನ್ನೂ ಸಮ್ಮಿಶ್ರಿತ ವಾಕ್ಯಗಳನ್ನೂ ಒಟ್ಟಿಗೆ ಅರ್ಥಕ್ಕೆ ಅನುಸಾರವಾದ ಸಂಬಂಧವಾಕ್ಯಗಳಿಂದ ಸೇರಿಸಿ ಸಮ್ಮಿಶ್ರಿತ ವಾಕ್ಯವನ್ನು ಮಾಡಬೇಕು.

ಉದಾಹರಣೆ.

(೧) ನಿನ್ನಲ್ಲಿ ಹೆಮ್ಮೆ ಇದೆ.

(೨) ನಿನ್ನಲ್ಲಿ ಅಜಾಗರೂಕತೆಯೂ ಇದೆ.

(೩) ಆದರೆ ನಿನ್ನಲ್ಲಿ ಸ್ವಲ್ಪ ಒಳ್ಳೇತನ ಉಂಟು.

(೪) ನಿನಗೆ ಧಾರಾಳವಾದ ಮನಸ್ಸುಂಟು.

(೫) ಹೀಗೆಂದು ನಾನು ತಿಳಿದಿದ್ದೆ.

(೧) + (೨) ಸೇರಿಸು

ನಿನ್ನಲ್ಲಿ ಹೆಮ್ಮೆಯೂ ಅಜಾಗರೂಕತೆಯೂ ಇವೆ

(೩) + (೪) + (೫) ಸೇರಿಸು

ಆದರೆ ನಿನಗೆ ಸ್ವಲ್ಪ ಒಳ್ಳೇತನವೂ ಧಾರಾಳವಾದ ಮನಸ್ಸೂ ಉಂಟೆಂದು ನಾನು ತಿಳಿದಿದ್ದೆ.

(೧) + (೨) + (೩) + (೪) + (೫) ಒಟ್ಟು ಕೂಡಿಸು.
ನಿನ್ನಲ್ಲಿ ಹೆಮ್ಮೆಯೂ ಅಜಾಗರೂಕತೆಯೂ ಇವೆ; ಆದರೆ ನಿನಗೆ ಸ್ವಲ್ಪ ಒಳ್ಳೇತನವೂ ಧಾರಾಳವಾದ ಮನಸ್ಸೂ ಉಂಟೆಂದು ನಾನು ತಿಳಿದಿದ್ದೆ.

---

## ೭ ನೇ ಅಧ್ಯಾಯ.

### ಪ್ರತ್ಯಕ್ಷ ಪರೋಕ್ಷ ನಿರೂಪಣ.

೧. ಹಿಂದೆ ನಡೆದ ಒಂದು ಸಂಗತಿಯನ್ನು ಅಥವಾ ಕಥಾ ಸರಣಿಯನ್ನು ಹೇಳುವಾಗ ಆಯಾ ಮನುಷ್ಯರು ಈಗ ಪ್ರತ್ಯಕ್ಷವಾಗಿ ಮಾತನಾಡುತ್ತಿರುವ ಹಾಗೆ ಹೇಳುವುದು "ಪ್ರತ್ಯಕ್ಷ ನಿರೂಪಣ" ಹಿಂದೆ ಅವರು ಮಾತನಾಡಿಕೊಂಡರೆಂದು ಉದಾಸೀನರಾದ ನಾವು ಈಗ ಹೇಳುವುದು "ಪರೋಕ್ಷ ನಿರೂಪಣ"

ಉ—ಪ್ರತ್ಯಕ್ಷನಿರೂಪಣಕ್ಕೆ

ಹನುಮಂತನು ರಾಮನೊಡನೆ — ಸೀತಾದೇವಿಯನ್ನು ಕಂಡಿದ್ದೆ; ನಿಮ್ಮ ಪಾದವನ್ನೇ ಸ್ಮರಿಸುತ್ತಿದಾರೆ; ಗುರುತಿಗಾಗಿ ಅವರ ಚೂಡಾರತ್ನವನ್ನು ಕೊಟ್ಟಿದಾರೆ: ಅದನ್ನು ಸನ್ನಿಧಿಯಲ್ಲಿ ಒಪ್ಪಿಸುತ್ತೇನೆ, ಎಂದು ಹೇಳಿದನು.

ಉ—ಪರೋಕ್ಷ ನಿರೂಪಣಕ್ಕೆ

ಹನುಮಂತನು ರಾಮನೊಡನೆ, ತಾನು ಸೀತಾದೇವಿಯನ್ನು ಕಂಡಿದ್ದಂತೆಯೂ, ಆಕೆ ರಾಮನ ಪಾದವನ್ನೇ ಸ್ಮರಿಸುತ್ತಾ ಇದ್ದಂತೆಯೂ, ಗುರುತಿಗಾಗಿ ಅಮ್ಮನವರು ತಮ್ಮ ಚೂಡಾರತ್ನವನ್ನು ಕೊಟ್ಟಿದಾ

ರೆಂತಲೂ, ಅದನ್ನು ರಾಮನ ಸನ್ನಿಧಿಯಲ್ಲಿ ತಾನೆ ಒಪ್ಪಿಸುತ್ತೇನೆಂತಲೂ, ಹೇಳಿದನು.

೨. ಪ್ರತ್ಯಕ್ಷ ನಿರೂಪಣವನ್ನು ಪರೋಕ್ಷ ನಿರೂಪಣವಾಗಿಯೂ ಪರೋಕ್ಷ ನಿರೂಪಣವನ್ನು ಪ್ರತ್ಯಕ್ಷ ನಿರೂಪಣವಾಗಿಯೂ ಬರೆಯುವುದಕ್ಕೆ ಈ ಕೆಳಗಿನ ನಿಬಂಧನೆಗಳನ್ನು ಅನುಸರಿಸಬೇಕು.

| ಪ್ರತ್ಯಕ್ಷ ನಿರೂಪಣೆಯಿಂದ, ಪರೋಕ್ಷ ನಿರೂಪಣೆಗೆ ತರಲು, | ಪರೋಕ್ಷ ನಿರೂಪಣೆಯಿಂದ ಪ್ರತ್ಯಕ್ಷ ನಿರೂಪಣೆಗೆ ತರಲು, |
|---|---|
| (೧) ಉತ್ತಮ ಮಧ್ಯಮ ಪುರುಷದ ಸರ್ವನಾಮಗಳನ್ನು ಪ್ರಥಮ ಪುರುಷದಲ್ಲಿ ಬರೆ. | ಪ್ರಥಮಪುರುಷದ ಸರ್ವನಾಮಗಳನ್ನು ಅರ್ಥಾನುಸಾರ ಉತ್ತಮ ಮಧ್ಯಮಪುರುಷದಲ್ಲಿ ಬರೆ. |
| (೨) ಇವನು, ಇವಳು, ಇದು, ಇವರು, ಇವುಗಳನ್ನು ಅವನು, ಅವಳು, ಅದು, ಅವರು, ಎಂದು ಪರಿವರ್ತನೆ ಮಾಡು. | ಅವನು, ಅವಳು, ಅದು ಅವರು, ಇವುಗಳನ್ನು ಅರ್ಥಾನುಸಾರವಾಗಿ ಇವನು, ಇವಳು, ಇದು, ಇವರು, ಎಂದು ಪರಿವರ್ತನೆಮಾಡು. |
| (೩) ವರ್ತಮಾನ ರೂಪದ ಕ್ರಿಯೆಗಳನ್ನು ಭೂತರೂಪದಲ್ಲಿ ಬರೆ. | ಭೂತರೂಪದ ಕ್ರಿಯೆಗಳನ್ನು ಅರ್ಥಾನುಸಾರ ವರ್ತಮಾನ ರೂಪದಲ್ಲಿ ಬರೆ. |

ವಿಚಾರ—ಎರಡು ವಿಧವಾದ ನಿರೂಪಣದಲ್ಲಿಯೂ ವರ್ತಮಾನರೂಪದಲ್ಲಿಯೇ ಬರೆಯುವ ವಾಡಿಕೆ ಉಂಟು.

| | |
|---|---|
| (೪) ಭೂತ ನ್ಯೂನ ರೂಪಗಳಿಗೆ 'ಇರು' ಧಾತುವಿನ ಭೂತ ರೂಪಗಳನ್ನು ಸೇರಿಸಿ ಭೂತರೂಪದ ಸಮಾಸ ಕ್ರಿಯೆಗಳನ್ನು ಮಾಡು. | 'ಇರು' ಧಾತುವಿನ ಭೂತ ರೂಪಗಳನ್ನು ಸೇರಿಸಿರುವ ಭೂತ ನ್ಯೂನ ರೂಪಗಳಲ್ಲಿ 'ಇರು' ಧಾತುವನ್ನು ಬಿಟ್ಟು ಅದನ್ನು ಮುಖ್ಯವಾದ ಕ್ರಿಯೆಮಾಡಿ ಭೂತರೂಪದಲ್ಲಿರಿಸು. |
| (೫) ಅಂತೆಯೂ, ಎಂತಲೂ, ಹಾಗೆಯೂ, ಆಗಿಯೂ, ಮೊದಲಾದ ಅವ್ಯಯ ರೂಪಗಳನ್ನು ಪ್ರತಿ ವಾಕ್ಯದ ಕೊನೆಯಲ್ಲಿ ಸೇರಿಸಿ, ಆ ವಾಕ್ಯವನ್ನು ನಾಮಾತ್ಮಕ ಅಧೀನ ವಾಕ್ಯವಾಗಿ ಮಾಡು. | ಅಂತೆಯೂ, ಎಂತಲೂ, ಹಾಗೆಯೂ, ಆಗಿಯೂ ಎಂಬ ಅವ್ಯಯ ರೂಪಗಳನ್ನು ಬಿಡು, ನಾಮಾತ್ಮಕ ಅಧೀನ ವಾಕ್ಯವನ್ನು ಪ್ರಧಾನ ವಾಕ್ಯವಾಗಿ ಮಾಡು. |
| (೬) ನಿನ್ನೆ, ಮೊನ್ನೆ, ಎಂಬ ಅವ್ಯಯಗಳಿಗೆ ಹಿಂದಿನ ದಿವಸ, ಅದಕ್ಕೆ ಮುನ್ನಾದಿವಸ, ಎಂದು ಬರೆ. | ಹಿಂದಿನ ದಿವಸ, ಮುನ್ನಾದಿವಸ, ಎಂದು ಇದ್ದರೆ ಅರ್ಥಾನುಸಾರ ನಿನ್ನೆ, ಮೊನ್ನೆ, ಎಂದು ಬರೆ. |

೪. ಕನ್ನಡದಲ್ಲಿ ಪ್ರತ್ಯಕ್ಷ ನಿರೂಪಣೆಯೇ ವಿಶೇಷವಾಗಿ ರೂಢಿಯಲ್ಲಿದೆ. ಪರೋಕ್ಷ ನಿರೂಪಣೆಯನ್ನು ತಪ್ಪಿಲ್ಲದೇ ಬರೆಯುವುದು ಕಷ್ಟ. ಕೆಲವರು ಪರೋ

ಕ್ಷ ನಿರೂಪಣೆಯಲ್ಲಿ ಆರಂಭಿಸಿ ಪ್ರತ್ಯಕ್ಷ ನಿರೂಪಣೆಯಲ್ಲಿ ಕೊನೆಗಾಣಿಸುವರು. ಇದು ತಕ್ಕ ಶಿಕ್ಷೆ ಇಲ್ಲದ ಅಸಂಸ್ಕಾರಿಗಳು ಮಾಡತಕ್ಕ ಕೆಲಸವಾಗಿದೆ. ಇದೆಲ್ಲಕ್ಕಿಂತಲೂ ಸುಲಭವಾದ ದಾರಿಯನ್ನು ಅನುಸರಿಸಿ ಪ್ರತ್ಯಕ್ಷ ನಿರೂಪಣವನ್ನು ಬರೆಯುವುದು ಉತ್ತಮವಾಗಿದೆ. ಪ್ರತ್ಯಕ್ಷ ನಿರೂಪಣೆಯನ್ನು ಪರೋಕ್ಷ ನಿರೂಪಣೆಯಾಗಿಯೂ, ಪರೋ ಕ್ಷನಿರೂಪಣೆಯನ್ನು ಪ್ರತ್ಯಕ್ಷ ನಿರೂಪಣೆಯಾಗಿಯೂ ಬರೆಯಬಹುದು. ವಿದ್ಯಾರ್ಥಿಗಳು ಈ ಅಭ್ಯಾಸವನ್ನು ಮಾಡುತ್ತಾ ಬಂದರೆ ಬರವಣಿಗೆಯ ಶಕ್ತಿಯುಂಟಾಗುವುದು.

## ೮ ನೇ ಅಧ್ಯಾಯ

### ವಿರಾಮಗಳು.

೧. ಮನುಷ್ಯನು ಮಾತನಾಡುವಾಗ ಸರಿಯಾದ ಸ್ಥಳದಲ್ಲಿ ಉಸಿರನ್ನು ನಿಲ್ಲಿಸುತ್ತಾನೆ. ಅರ್ಥವನ್ನು ಅನುಸರಿಸಿ ಹೀಗೆ ಅಲ್ಲಲ್ಲಿ ನಿಲ್ಲಿಸುವರು. ಒಂದು ಕಡೆ ಧ್ವನಿಯನ್ನು ಎತ್ತರಿಸಿ ಒಂದುಕಡೆ ತಗ್ಗಿಸುವರು. ಒಂದೆಡೆಯಲ್ಲಿ ಮೆಲ್ಲಗೂ ಒಂದೆಡೆಯಲ್ಲಿ ಗಟ್ಟಿಯಾಗಿಯೂ ಮಾತನಾಡುವರು. ಒಂದು ಕಡೆ ಸ್ವಲ್ಪಹೊತ್ತು ನಿಲ್ಲಿಸಿ ಮಾತನಾಡುವರು. ಒಂದುಕಡೆ ಹೆಚ್ಚುಹೊತ್ತು ನಿಲ್ಲಿಸಿ ಮಾತನಾಡುವರು. ಒಂದು ಸ್ಥಳದಲ್ಲಿ ಪ್ರಶ್ನೆಯನ್ನು ಕೇಳುವರು, ಮತ್ತೊಂದು ಸ್ಥಳದಲ್ಲಿ ಮೆಚ್ಚಿಗೆಯನ್ನೂ ಆಶ್ಚರ್ಯವನ್ನೂ ತೋರಿಸುವರು. ಸಂದರ್ಭಾನುಸಾರವಾಗಿ ಧ್ವನಿಯು ಈ ಕೆಲಸಗಳನ್ನು ರೂಢಿಯಾಗಿ ಮಾಡುವುದು.

೨. ಆದರೆ ಬರವಣಿಗೆಯಲ್ಲಿಯೂ ಇಂಥಾ ಅರ್ಥ ವ್ಯತ್ಯಾಸಗಳನ್ನು ತೋರಿಸುವುದಕ್ಕೆ ಕೆಲವು ಸಂಜ್ಞೆಗಳುಂಟು. ಅವುಗಳು ಯಾವವೆಂದರೆ:—

(೧), ಪಾದ ವಿರಾಮ.

(೨); ಅರ್ಧ ವಿರಾಮ.

(೩): ಅಪೂರ್ಣ ವಿರಾಮ.

(೪). ಪೂರ್ಣ ವಿರಾಮ.

(೫)? ಪ್ರಶ್ನೆ ಗುರುತು.

(೬)! ಮೆಚ್ಚಿಗೆ ಅಥವಾ ಆಶ್ಚರ್ಯದ ಗುರುತು.

(೭)() ಬ್ರಾಕೆಟ್ಟು ಅಥವಾ ಕಂಸ.

(೮) " " ಪರವಾಕ್ಯ ಸಂಜ್ಞೆ.

— ಇತರರು ಹೇಳುವ ಮಾತಿನ ಹಿಂದೆ ಈ ಗುರುತನ್ನೂ ಹಾಕುವುದುಂಟು.

೩. ಈ ಸಂಜ್ಞೆಗಳ ಪ್ರಯೋಗಹೇಗೆಂದರೆ:—

(೧) ಸಂಬೋಧನಾ ವಿಭಕ್ತಿಯ ಆಚೆ,

(೨) ಪ್ರತಿ ಭಾವರೂಪದ ವಚನಗಳ ಮತ್ತು ನ್ಯೂನರೂಪದ ವಚನಗಳ ಆಚೆ,

(೩) ಸಮುಚ್ಚಯದ ಪ್ರತಿಯೊಂದು 'ಊ' ಕಾರದ ಆಚೆ,

(೪) ವಾಕ್ಯದಲ್ಲಿ ಒಂದೇ ಸಮವಾದ ಸ್ಥಿತಿಯನ್ನು ಹೊಂದಿ ಇರುವ ಹಲವು ಶಬ್ದಗಳಲ್ಲಿ ಪ್ರತಿಯೊಂದು ಶಬ್ದದ ಆಚೆ,

(೫) ಪ್ರತಿ ಅಧೀನವಾಕ್ಯವಾದ ಆಚೆ,

ಈ ಪಾದ ವಿರಾಮವನ್ನು ಪ್ರಯೋಗಿಸಬೇಕು.

ಉದಾಹರಣೆ:— ಅಯ್ಯಾ ಧೃತರಾಷ್ಟ್ರ, ಹಿಂದಕ್ಕೆ ಶ್ರೀರಾಮನು ಪಿತೃವಾಕ್ಯ ಪರಿಪಾಲನೆಯನ್ನು ಮಾಡಲು, ತಾಯಿಯಾದ ಕೈಕೇ ಇಷ್ಟವನ್ನು ನೆರವೇರಿಸಲು, ತಾನು ಸಾರ ಬಟ್ಟೆಯನ್ನುಟ್ಟು, ಸಕಲೈಶ್ವರ್ಯವನ್ನೂ ಬಿಟ್ಟು, ಕಾಡಿಗೆ ಹೋಗಿ, ಮಾರೀಚನನ್ನೂ, ಖರದೂಷಣ ತ್ರಿಶಿರರನ್ನೂ, ಸಂಹರಿಸಿ, ಸುಗ್ರೀವ, ಹನುಮಂತ, ನಳ, ನೀಲ, ಜಾಂಬವಂತ, ಇವರೊಡನೆ ಸ್ನೇಹವನ್ನು ಬೆಳಸಿ, ಮೊದಲು ಹನುಮಂತನನ್ನು ಭಂಟನಾಗಿ ಕಳುಹಿಸಿ, ಸೀತೆ ಇರುವ ಸ್ಥಳವನ್ನು ಗೊತ್ತು ಮಾಡಿದ್ದೂ, ತರುವಾಯ ಅಂಗದನನ್ನು ರಾಯಭಾರಿಯಾಗಿ ಲಂಕೆಗೆ ಕಳುಹಿಸಿದ್ದೂ, ಸಹಾ ಲೋಕವಿದಿತವಾಗಿದೆ ಎಂದು ನೀನು ಬಲ್ಲೆ ಯಷ್ಟೆ.

೪. (೧) ಅಧೀನ ವಾಕ್ಯಗಳು ದೊಡ್ಡದಾಗಿದ್ದರೆ ಪ್ರತಿ ಅಧೀನವಾಕ್ಯದ ಆಚೆ,

(೨) ಪ್ರತಿ ಸಂಯೋಜಿತ ವಾಕ್ಯದಲ್ಲಿಯೂ ಪ್ರಧಾನವಾಕ್ಯಕ್ಕೆ ಸಮಾನವಾದ ಪ್ರತಿಯೊಂದು ವಾಕ್ಯದ ಆಚೆ ಅರ್ಧ ವಿರಾಮವನ್ನು ಹಾಕಬೇಕು. ಅಂಥಾ ವಾಕ್ಯಗಳಲ್ಲಿ ಕೊನೇ ವಾಕ್ಯದ ಆಚೆ ಅಪೂರ್ಣವಿರಾಮವಿರಬೇಕು.

ಕೆಲವರು ಪ್ರಧಾನವಾಕ್ಯಕ್ಕೆ ಸಮಾನವಾದ ಪ್ರತಿಯೊಂದು ವಾಕ್ಯದ ಆಚೆ ಪೂರ್ಣ ವಿರಾಮವನ್ನು ಹಾಕುವರು. ಇದರಿಂದ ಅರ್ಥವೇನೂ ಕೆಡುವುದಿಲ್ಲ.

**ಉದಾಹರಣೆ.**

(೧) ಹಲಗೆ ಬಳಹವ ಪಿಡಿಯದೊಂದಗ್ಗಳಿಕೆ; ಪದವಿಟ್ಟಳುಪದೊಂದ । ಗ್ಗಳಿಕೆ; ಪರರೊಡ್ಡವದರೀತಿಯ ಕೊಳ್ಳದಗ್ಗಳಿಕೆ; ॥ ಬಳಸಿ ಬರೆಯಲು ಕಂಠ ಪತ್ರದ। ಅಲುಹುಗೆಡದಗ್ಗಳಿಕೆ: ಎಂಬೀ । ಬಲುಹು ಗದುಗಿನ ವೀರನಾರಾಯಣನ ಕಿಂಕರಗೇ ॥

(೨) ಜೀವಲೋಕವನ್ನು ರಕ್ಷಿಸಬೇಕು;
ಧರ್ಮವನ್ನು ರಕ್ಷಿಸಬೇಕು;
ಸ್ವಧರ್ಮವನ್ನು ರಕ್ಷಿಸಬೇಕು;
ಸ್ವಜನವನ್ನು ರಕ್ಷಿಸಬೇಕು.

೫. (೧) ಒಂದು ಸಂಗತಿಯನ್ನು ಸೂಚಿಸಿ ತರುವಾಯ ಅದರ ವಿವರಣವನ್ನು ಬರೆಯುವಾಗ್ಗೆ, ಆ ಸೂಚನೆಯ ತರುವಾಯ,

(೨) ಸಂಯೋಜಿತ ವಾಕ್ಯಗಳ ಸರಣಿಯಲ್ಲಿ ಕೊನೇ ವಾಕ್ಯದ ಆಚೆ,

(೩) ಹಲವು ಅಧೀನವಾಕ್ಯಗಳು ಅರ್ಧ ವಿರಾಮದಿಂದ ವಿಂಗಡಿಸಲ್ಪಟ್ಟಿದ್ದರೆ, ಕೊನೇ ಅಧೀನ ವಾಕ್ಯದ ಆಚೆ,

ಅಪೂರ್ಣ ವಿರಾಮವನ್ನು ಹಾಕಬೇಕು.

ಅರ್ಧ ವಿರಾಮಕ್ಕೆ ಕೊಟ್ಟಿರುವ ಉದಾಹರಣೆಗಳು ಇದಕ್ಕೂ ವರ್ತಿಸುವವು.

೬. (೧) ಸಂಪೂರ್ಣಾರ್ಥ ಕೊಡುವ ವಾಕ್ಯದ ಕೊನೆಯಲ್ಲಿ,

(೨) ಪ್ರತಿಸಂಜ್ಞಾಕ್ಷರದ ಆಚೆ,

ಪೂರ್ಣವಿರಾಮವನ್ನು ಹಾಕಬೇಕು.

೭. ಪ್ರತಿ ಪ್ರಶ್ನೆಯ ಆಚೆಯೂ ಪ್ರಶ್ನೆಯ ಗುರುತನ್ನು ಹಾಕಬೇಕು.

ಉ—ನಿನ್ನ ಹೆಸರೇನು?

೮. ಮೆಚ್ಚಿಗೆ, ಆಶ್ಚರ್ಯ, ಆನಂದ, ಹಾಸ್ಯ ಮೊದಲಾದ ರಸಗಳನ್ನು ತೋರಿಸುವಾಗಲೂ, ಆತ್ಮಗತವಾಗಿ ತನ್ನಷ್ಟಕ್ಕೆ ತಾನೇ ಕೂಗಿಕೊಳ್ಳುವಾಗಲೂ, ಮೆಚ್ಚಿಗೆ ಗುರುತನ್ನು ಹಾಕಬೇಕು.

ಉ—ಅಯ್ಯೋ! ರಾಮಾ! ಅರ್ಜುನನ ಪರಾಕ್ರಮವೆತ್ತ! ಉತ್ತರನ ಪರಾಕ್ರಮವೆತ್ತ!

೯. (೧) ಹಿಂದೆ ಬರುವ ಶಬ್ದದ ಅರ್ಥವನ್ನು ಮುಂದೆ ಬ್ರಾಕೆಟ್ಟು (ಕಂಸ) ಹಾಕಿ ವಿವರಿಸುವುದುಂಟು.

(೨) ಒಂದು ವಾಕ್ಯವನ್ನು ಬರೆಯುವಾಗ ವಾಕ್ಯದ ಸರಣಿಯೂ ಅರ್ಥವೂ ಕೆಡದ ಹಾಗೆ ಅದಕ್ಕೆ ಸಂಬಂಧಿಸಿದ ಒಂದು ಹೊಸ ಸಂಗತಿಯನ್ನು ಬ್ರಾಕೆಟ್ಟಿನಲ್ಲಿ (ಕಂಸದಲ್ಲಿ) ಬರೆದು ಮುಂದಕ್ಕೆ ವಾಕ್ಯವನ್ನು ಪೂರೈಸುವುದುಂಟು.

ಉದಾಹರಣೆ.

ಎಂಥಾ ಮನುಷ್ಯನಲ್ಲಿಯಾಗಲಿ (ಅವನ ಕೆಟ್ಟ ಗುಣಗಳು ಹಾಗಿರಲಿ) ಯಾವುದಾದರೂ ಒಂದು ಸುಗುಣ ವಿಶ್ವೇ ಇರುವುದು.

೧೦. ಇತರರು ಆಡಿದ ಮಾತನ್ನೇ ನಾವು ಬರೆಯುವಾಗ ಪರವಾಕ್ಯ ಸಂಜ್ಞೆಯನ್ನು ಹಾಕುವರು.

ಉ—ಶ್ರೀಕೃಷ್ಣನು, "ನನ್ನ ಪ್ರಾಣವೇ ಪಾಂಡವರು," ಎಂದು ಹೇಳಿದನು.

ಶ್ರೀಕೃಷ್ಣನು — ನನ್ನ ಪ್ರಾಣವೇ ಪಾಂಡವರು, ಎಂದು ಹೇಳಿದನು.

## ೯ ನೇ ಅಧ್ಯಾಯ.

### ದೋಷ ಪ್ರಕರಣ

ವಾಕ್ಯಗಳ ಪ್ರಯೋಗದಲ್ಲಿ ಮೂರು ವಿದವಾದ ದೋಷಗಳುಂಟು:

I ಪದ ದೋಷ.

II ವಾಕ್ಯದೋಷ.

III ಅರ್ಥದೋಷ.

ಈ ಮೂರು ವಿಧವಾದ ದೋಷಗಳನ್ನು ಬೇರೆ ಬೇರೆಯಾಗಿ ವಿಚಾರ ಮಾಡೋಣ.

### I ಪದ ದೋಷ

೧. ಅಪುಷ್ಟಾರ್ಥ — ಪ್ರಕೃತ ಸಂದರ್ಭಕ್ಕೆ ಅಗತ್ಯವಿಲ್ಲದ ಪ್ರಯೋಗ.

ಉ—ಅಷ್ಟಾರ್ಥಬಾಹು

‘ಇಲ್ಲಿ ಚತುರ್ಭುಜ’ ವೆಂದರೆ ಸಾಕು. ‘ಅಷ್ಟಾರ್ಥ’ ಅನಾವಶ್ಯಕವಾದ್ದು.

೨. ಅಸಮರ್ಥ-ರೂಢವಿಲ್ಲದೆ ಯೋಗ ಮಾತ್ರ ಇರುವ ಪದ.

ಉ—ಅಂಬುಧರ=ಮೇಘ, ನೀರನ್ನುಳ್ಳದ್ದು. ಇದು ಎಲ್ಲರೂ ಪ್ರಯೋಗಿಸುವ ರೂಢ.

ಅಂಬುಧರ = ಸಮುದ್ರ, ನೀರನ್ನುಳ್ಳದ್ದು. ಇದೂ ನೀರನ್ನುಳ್ಳದ್ದೇ ಸರಿ. ಆದರೆ ರೂಢಿಇಲ್ಲಿ ಸಮುದ್ರವೆಂದು ಅರ್ಥವಿಲ್ಲ.

೩. ನೇ ಯಥಾರ್ಥ—ಗ್ರಂಥಕರ್ತನ ಸ್ವಂತ ಸಂಕೇತ ಪದಗಳನ್ನು ಪ್ರಯೋಗಿಸಬಾರದು.

೪. ಚ್ಯುತ ಸಂಸ್ಕಾರ-ವ್ಯಾಕರಣ ಮರ್ಯಾದೆಯನ್ನು ಮೀರಿ ಪದ ಪ್ರಯೋಗ ಕೂಡದು.

ಉ—1. ದಾರಾ ಮುರಿದುಹೋದ=ದಾರ ಕಿತ್ತು ಹೋಯಿತು.

2. ಹಾಗಂತು ಹೇಳಿದ=ಹಾಗೆಂದು ಹೇಳಿದನು.

೫. ಪ್ರಯೋಜಕ—ಪ್ರಯೋಜನವಿಲ್ಲದ ಪ್ರಯೋಗ ಕೂಡದು.

ಉ—ವಜ್ರಾಯುಧದ ಪೆಟು ಬೀಳುವುದಕ್ಕೆ ಮುಂಚೆ ಚಲಿಸುತಾ ಇದ್ದದು=ಪರ್ವತ.

೬. ಕ್ಲಿಷ್ಟ—ಅರ್ಥವನ್ನು ಮಾಡಲು ದೂರವಾಗಿ ಯೋಚಿಸಬೇಕಾದ್ದು.

ಉ—ಹವಿವಾಹನ ಕುಲವೈರಿಯು ತಲೆದಿಂಬ ಮಾಡಿ ಮಲಗಿರ್ಪವಳು=ಅಗ್ನಿಯ ಕುಲವಾದ ಮೇಕೆಯ ಶತ್ರುವಾದ ತೋಳ; ಇಂಥಾ ತೋಳ ಎಂದರೆ ಕೈ ತೋಳ ಮೇಲೆ ತಲೆ ಇರಿಸಿಕೊಂಡು ಮಲಗಿರುವ ಹೆಂಗುಸು.

೭. ಗ್ರಾಮ್ಯ-ಗ್ರಾಮ್ಯ ಶಬ್ದಗಳು ಕೂಡದು.

ಉ—1. ಹೋಗುತಿವಿನಿ=ಹೋಗುತ್ತೇನೆ.

2. ಇದ್ದಾನೆ=ಇದಾನೆ.

3. ನನಕೇನು=ನನಗೇನು.

೮. ವಿಶುದ್ಧಮತಿಕೃತು — ವ್ಯತ್ಯಸ್ತವಾದ ಅರ್ಥ ತೋರುವುದು.

ಉ — ಅಂಜಿಕಾರಮಣ; ಮಾಧವ; ಅಕಾರ್ಯಮಿತ್ರ=
(1 ದೊರೆ, 2 ನೀಚ.)

೯. ಅಶ್ಲೀಲ—ಅಮಂಗಳಕರವಾದ, ಜುಗುಪ್ಸೆ ಕರವಾದ, ಅಥವಾ ನಾಚಿಕೆಯನ್ನು ಹುಟ್ಟಿಸುವ ಶಬ್ದ.

ಉ—1. ಅವನು ಬಡಕೊತಾನೆ = ಅವನು ಕೂಗಿಕೊ ಳ್ಳುತಾನೆ.

2. ಪರೋತ್ಸರ್ಗೈಕಜೀವಿ = ಶತ್ರುಗಳನ್ನು ಓಡಿಸಿ ಜೀವಿಸುವವನು; ಅಪಾನವಾಯು

3. ನೀಚಸಾಧನ=ಅಲ್ಪಸೈನ್ಯ; ಪುರುಷಚಿಹ್ನೆ.

೧೦. ಪರುಷ—ಶೃತಿ ಕಷ್ಟವಾಗುವ ಹಾಗೆ ಪ್ರಯೋಗ ಕೂಡದು.

ಉ—ವಿಷವೃಕ್ಷಭೇದ.

## II ವಾಕ್ಯ ದೋಷಗಳು,

ಕರ್ತೃಕರ್ಮ ಕ್ರಿಯೆಗಳೂ ಅವುಗಳ ವಿಶೇಷಣಗಳೂ ವಾಕ್ಯಭಾಗಗಳಾಗಿವೆ. ವಾಕ್ಯದ ಅರ್ಥ ಚೆನ್ನಾಗಿ ತಿಳಿಯುವುದಕ್ಕಾಗಿ ವಾಕ್ಯ ಭಾಗಗಳು ಹೇಗೆ ಇರಬೇಕೋ ಹಾಗಿಲ್ಲದೆ ಅಕ್ರಮವಾಗಿರುವುದರಿಂದ ದೋಷಗಳು ಹುಟ್ಟುವವು. ಅವು ಯಾವವೆಂದರೆ.

೧. ಸ್ಥಾನಪಲ್ಲಟ—ವಾಕ್ಯ ಭಾಗಗಳು ಸರಿಯಾದ ಸ್ಥಳದಲ್ಲಿರದೇ ಇರುವುದು.

ಉ—"ಇಂಗ್ಲಿಷರೂ ಡಚ್ಚರಂತೆಯೇ ಉತ್ತರ ಸಾಗರದ ಮಾರ್ಗವಾಗಿ ಇಂಡಿಯಾಕ್ಕೆ ಬರಬೇಕೆಂದು ಮಾಡಿದ್ದ ಪ್ರಯತ್ನವು ವ್ಯರ್ಥವಾಯಿತು."

ಇದರಲ್ಲಿ ಎರಡು ವಾಕ್ಯಗಳಿವೆ, 'ಡಚ್ಚರು ಉತ್ತರ ಸಾಗರದ ಮಾರ್ಗವಾಗಿ ಇಂಡಿಯಾಕ್ಕೆ ಬರಬೇಕೆಂದು ಪ್ರಯತ್ನ ಮಾಡಿದ್ದರು, ಅದು ವ್ಯರ್ಥವಾಯಿತು.' 'ಇಂಗ್ಲೀಷರೂ ಅದೇಮಾರ್ಗವಾಗಿ ಇಂಡಿಯಾಕ್ಕೆ ಬರಬೇಕೆಂದು ಪ್ರಯತ್ನಮಾಡಿದ್ದರು, ಅದು ವ್ಯರ್ಥವಾಯಿತು'.' ಇದನ್ನು ಸರಿಮಾಡಿ ಬರೆಯೋಣ. 'ಇಂಗ್ಲಿಷರೂ ಉತ್ತರ ಸಾಗರದ ಮಾರ್ಗವಾಗಿ ಇಂಡಿಯಾಕ್ಕೆ ಬರಬೇಕೆಂದು ಮಾಡಿದ ಪ್ರಯತ್ನವು ಡಚ್ಚರ ಪ್ರಯತ್ನವಾದ ಹಾಗೆಯೇ ವ್ಯರ್ಥವಾಯಿತು.'

ಇಂಥಾ ದೋಷಕ್ಕೆ ದೂರಾನ್ವಯವೆಂತಲೂ ಹೇಳುತಾರೆ.

೨. ಪುನರುಕ್ತಿ--ವಾಕ್ಯದಲ್ಲಿ ಬಂದ ಶಬ್ದವನ್ನೇ ಪುನಃ ಪುನಃ ಪ್ರಯೋಗಿಸುವುದು.

ಉ—'ಕೌರವನು ಯುದ್ಧಕ್ಕೆ ಹೊರಟಾಗ ಕೌರವನ ಸೇನೆಯು ದಾರಿಯಲ್ಲಿ ಆ ದಾರಿಗೆ ಅಡ್ಡಲಾಗಿ ಬೆಕ್ಕು ಓಡಿಹೋಯಿತೆಂದು ಕೌರವನ ಸೇನಾನಾಯಕರು ಮನಸ್ಸನ್ನು ಇಳೀಬಿಟ್ಟರು.' ಇದನ್ನು ಸರಿಮಾಡೋಣ.

ಕೌರವನು ಯುದ್ಧಕ್ಕೆ ಹೊರಟಾಗ ದಾರಿಯಲ್ಲಿ ಅಡ್ಡಲಾಗಿ ಬೆಕ್ಕು ಓಡಿಹೋಯಿತೆಂದು ಕುರು ಸೇನಾನಾಯಕರು ಮನಸ್ಸನ್ನು ಇಳೀಬಿಟ್ಟರು.

೩. ವಾಕ್ಯಗರ್ಭಿತ—ಒಂದು ವಾಕ್ಯದೊಳಗೆ ಇನ್ನೊಂದು ವಾಕ್ಯವನ್ನು ಸೇರಿಸುವುದು.

ಉ—ರಾಜನ ಕ್ರೋಧಾಗ್ನಿಯಲ್ಲಿ, ದೈವವನ್ನು ಮೀರ ಲಾಗದು, ಹಗೆಗಳು ಬಿದ್ದುಬಿಟ್ಟರು.

ವಾಕ್ಯದ ಮಧ್ಯೆ 'ದೈವವನ್ನು ಮೀರಲಾಗದು' ಎಂಬ ವಾಕ್ಯವನ್ನು ತುರುಕಿದೆ. ಇದು ತಪ್ಪು. ಹೀಗೆ ವಾಕ್ಯವನ್ನು ಮಧ್ಯೆ ತುರುಕಿ ಆ ವಾಕ್ಯವನ್ನು ಕಂಸ ಗಳಿಂದ ಭಿನ್ನಿಸುವರು; ಇದೂ ಕೂಡ ನಮ್ಮ ಪ್ರಾಚೀನಪದ್ಧತಿ ಮೀರಿ ತಪ್ಪು.

೪. ಸಮಾಪ್ತ ಪುನರಾಪ್ತಕ—ಪೂರ್ತಿಯಾದ ಅರ್ಥವನ್ನು ಪುನಃ ಹೇಳುವುದು.

ಉ — ಜಿಂಕೆಗಳು ಓಡತಕ್ಕಂಥಾ, ಆನೆಗಳಿರುವಂಥಾ, ಸಿಂಹಗಳ ಸಂಚಾರ ಉಳ್ಳಂಥಾ ವಿಂಧ್ಯಾರಣ್ಯದಲ್ಲಿ ದ್ದರೂ ಕರಡಿಗಳ ಸಾಲಿನಲ್ಲಿದೇವೆ.

೫. ಅಧಿಕಪದ—ಕೆಲವು ಮಾತಿನಲ್ಲಿ ಹೇಳಬ ಹುದಾದ್ದನ್ನು ಹೆಚ್ಚುಮಾತಿನಲ್ಲಿ ಹೇಳುವುದು.

೬. ಗೂಢ — ಕ್ರಿಯೆಗಳನ್ನೂ ಸರ್ವನಾಮ ಗಳನ್ನೂ ಗೊತ್ತಿಲ್ಲದೆ ಪ್ರಯೋಗಿಸುವುದರಿಂದ ಈ ದೋಷಹುಟ್ಟುವುದು.

ಉ—ರಘೋಬನ ಅಭಿಮತವನ್ನು ಅನುಸರಿಸಿ ನಡೆಯ ದೇಹೋದ ಬಾಳಾಜೀ ಬಾಜೀರಾಯನು ತಮ್ಮ ನಾದ ಸದಾಶಿವರಾವ್ ಭಾವು ಎಂಬಾತನಲ್ಲಿ ನಂಬಿಕೆಯನ್ನಿಟ್ಟುಕೊಂಡಿದ್ದನು. ಅವನು ಕುಲ ಗೇಡಿಯುಂತಲೂ ಅವನ ಇಷ್ಟಪ್ರಕಾರ ನಡೆದರೆ ಅಪಾಯ ಉಂಟೆಂತಲೂ ತಿಳಿದು ಅವನ ಮಾತನ್ನೇ ನೆರವೇರಿಸಿದನು.

ಮೇಲಿನ ವಾಕ್ಯದಲ್ಲಿ ನಂಬಿಕೆಯನ್ನು ಇಟ್ಟು ಕೊಂಡಿದ್ದವರು ಯಾರೋ, ಎರಡನೇ ವಾಕ್ಯದಲ್ಲಿ 'ಇವನು, ಅವನು' ಎಂಬ ಸರ್ವನಾಮಗಳು ಯಾವ ನಾಮಪದಗಳಿಗೆ ಸಂಬಂಧಿಸುವವೋ ಗೊತ್ತಾಗುವು ದಿಲ್ಲ. ಇದನ್ನು ಸರಿಮಾಡಿ ಬರೆಯೋಣ:

'ರಘೋಬನ ಅಭಿಮತವನ್ನನುಸರಿಸಿ ನಡೆಯದೇ ಹೋದ ಬಾಳಾಜೀಬಾಜೀರಾಯನು ತನ್ನ ತಮ್ಮ ನಾದ ಸದಾಶಿವರಾವ್ ಭಾವು ಎಂಬಾತನಲ್ಲಿ ನಂಬಿಕೆ ಯನ್ನಿಟ್ಟುಕೊಂಡಿದ್ದನು; ಮತ್ತು ರಘೋಬನು ಕುಲ ಗೇಡಿ ಎಂತಲೂ ಅವನ ಇಷ್ಟಪ್ರಕಾರ ನಡೆದರೆ ಅಪಾ ಯವುಂಟೆಂತಲೂ ತಿಳಿದು ಸದಾಶಿವನ ಮಾತನ್ನೇ ನೆರ ವೇರಿಸಿದನು.'

೭. ಖಂಡವಾಕ್ಯ—ಸಾಧಾರಣವಾದ ಮಾತಿ ನಲ್ಲಿಯೂ ಸಾಧಾರಣವಾದ ಬರವಣಿಗೆಯಲ್ಲಿಯೂ ವಾಕ್ಯದಬಿಗಿ ವಿಶೇಷವಾಗಿರುವುದಿಲ್ಲ. ದಿನಗಟ್ಟಲೆ ಚರ್‍ಯದಲ್ಲಿ ಇದು ಅಂಥಾ ದೋಷವೆನಿಸುವುದಿಲ್ಲ. ಗ್ರಂ ಥಗಳಲ್ಲಿಯೂ ಉಪನ್ಯಾಸಗಳಲ್ಲಿಯೂ ಇದು ದೋಷ ವೆಂದು ಗಣನೆಮಾಡಿದಾರೆ. ಖಂಡವಾಕ್ಯವು ಪುಡಿ ಹಿಟ್ಟನ್ನು ಉದುರಿಸಿದಹಾಗಾಗುವುದು. ಅಖಂಡ ವಾಕ್ಯವು ಪುಡಿ ಹಿಟ್ಟನ್ನು ಕಲಸಿ ಮುದ್ದೆಮಾಡಿದಂತಾ ಗುವುದು.

ಖಂಡವಾಕ್ಯಕ್ಕೆ ಉದಾಹರಣೆ

"ಮಹಮ್ಮದಲ್ಲಿಯು ತಿರುಚನಾಪಳ್ಳಿಯಲ್ಲಿ ಅವಿತುಕೊಂಡಿದ್ದು ಎಲ್ಲಾ ಕಡೆಯಲ್ಲಿಯೂ ನಷ್ಟ ಹೊಂದಿ ಪುನಃ ಇಂಗ್ಲಿಷರ ಸಹಾಯವನ್ನು ಅಪೇಕ್ಷಿ ಸಿದನು."

ಇದನ್ನು ಬಂಧುರವಾಗಿ ಅಖಂಡವಾಕ್ಯ ರೀತಿಯಲ್ಲಿ ಬರೆಯೋಣ:—

‘ಎಲ್ಲಾ ಕಡೆಯಲ್ಲಿಯೂ ನಷ್ಟಹೊಂದಿ ಕಡೆಗೆ ತಿರುಚನಾಪಳ್ಳಿಯಲ್ಲಿ ಅವಿತುಕೊಂಡಿದ್ದ ವೊಪಮ್ಮದಲ್ಲಿಯು ಪುನಃ ಇಂಗ್ಲಿಷರ ಸಹಾಯವನ್ನು ಅಪೇಕ್ಷಿಸಿದನು.’

III ಅರ್ಥ ದೋಷಗಳು.

೧. ಅಪಾರ್ಥ — ಸರಿಯಾದ ಅರ್ಥವಾಗದ ವಾಕ್ಯ.

ಉ—ವಂಶ ನಾಶವಾಯಿತು.

ಇಲ್ಲಿ ವಂಶ ಶಬ್ದಕ್ಕೆ ೨ ಅರ್ಥ ವಿದೆ.

ವಂಶ = ಸಂತತಿ.

ವಂಶ = ಬಿದರು.

೨. ಸಂಶಯ — ಅರ್ಥ ಸಂಶಯವಾಗುವಂತೆ ವಾಕ್ಯವನ್ನು ಬರೆಯುವುದು.

೩. ಅತಿಮಾತ್ರ — ಯಾರೂ ಹೇಳದ ವಾಕ್ಯವನ್ನು ಹೇಳುವುದು.

ಉ—ಅವ ಅತ್ತು ಅತ್ತು ಕಂಣೀರು ಹೊಳೆಯಾಗಿ ಹರಿಯಿತು.

ಅವಳು ನೋಡಿ ನೋಡಿ ದಾರಿ ಸವೆಯಿತು.

೪. ಪರುಷ—ಕ್ರೂರವಾದ ಅರ್ಥವುಳ್ಳದ್ದು.

ಉ—ಹುಡುಗರು ಹಣ್ಣು ಕೇಳಿದರು. ಅವರ ದಾವಾನಲನಿಗೆ ಸೌದೆಯನ್ನು ಹಾಕು.

೫. ವಿರಸ — ಪ್ರಕೃತ ಸಂದರ್ಭದ ರಸಕ್ಕೆ ವಿರೋಧವಾದ್ದು.

ಉ—ನಾವು ಗಂಡಸರು, ಸೀರೆಯನ್ನು ಕೊಟ್ಟು ಮಾನವನ್ನು ಕಾಪಾಡಿ.

೬. ಹೇತುಶೂನ್ಯ—ಕಾರಣವಿಲ್ಲದ ಅರ್ಥ.

ಉ—ಮುತ್ತನ್ನು ಹರಡಿದ್ದ ದಾರಿಯಲ್ಲಿ ಓಡಿಹೋದೆ.

೭. ವಿರುದ್ಧ — ಕಾಲದೇಶಗಳಿಗೆ ವಿರುದ್ಧವಾದದ್ದು.

ಉ—ಆ ಮರಳ ಕಾಡಿನಲ್ಲಿ ಹರಿಯುವ ಕಾವೇರಿಯು ನನ್ನ ಬಾಯಾರಿಕೆಯನ್ನು ಅಡಗಿಸಿತು.

---

## ೧೦ ನೇ ಅಧ್ಯಾಯ.

### ವಾಕ್ಯದ ವಿಶೇಷ ವಿಧಿಗಳು.

೧. ವಾಕ್ಯದ ರಚನೆಯಲ್ಲಿ ಕೆಲವು ವಿಶೇಷ ವಿಧಿಗಳುಂಟು. ಮುಖ್ಯವಾಗಿ ಅರ್ಥವನ್ನು ಸ್ಪಷ್ಟ ಮಾಡಬೇಕಾದ್ದು ಅಗತ್ಯ. ಇದಕ್ಕಾಗಿ (೧) ಪ್ರಧಾನವಾಕ್ಯದ ಕರ್ತೃ ಕರ್ಮ ಕ್ರಿಯೆಗಳು ಇಂಥಾದ್ದೆಂದು ಗೊತ್ತುಮಾಡಿಕೊಳ್ಳಬೇಕು. (೨) ತರುವಾಯ ಪ್ರಧಾನವಾಕ್ಯದ ವಿಶೇಷಣಗಳನ್ನು ಆಯಾ ವಿಶೇಷ್ಯಗಳಿಗೆ ಕೂಡಿದ ಮಟ್ಟಿಗೂ ಸಮೀಪವಾಗಿ ಬರೆಯಬೇಕು.

೨. ವಾಕ್ಯವನ್ನು ಬರೆಯುವಾಗ ಎರಡು ವಿಷಯಗಳನ್ನು ಯೋಚಿಸಬೇಕು. I ಒಕ್ಕಣೆ, II ಭಾಷಾಶೈಲಿ.

### I. ಒಕ್ಕಣೆ

೩. ವಾಕ್ಯ ರಚನೆಯಲ್ಲಿ ಬಿಡಬೇಕಾದ ದೋಷಗಳು ಕೆಲವನ್ನು ವಾಕ್ಯ ದೋಷಗಳ ಹೇಳುವಾಗ

೯ನೇ ಅಧ್ಯಾಯದಲ್ಲಿ ಕಾಣಿಸಿದೆ. ಆ ದೋಷಗಳನ್ನು ಬಿಡಬೇಕು.

ಆದರೆ ಅಷ್ಟೇ ಸಾಲದು. ಈ ಕೆಳಗಿನ ವಿಧಿಗಳನ್ನು ಅನುಸರಿಸಬೇಕು.

(೧) ವಿಶೇಷಣಗಳನ್ನು ಸಾಧ್ಯವಾದಮಟ್ಟಿಗೂ ವಿಶೇಷ್ಯಗಳ ಹಿಂದೆಯೇ ಬರೆಯಬೇಕು. ಸತಿ ಸಪ್ತಮಿ, ಸಮಯಾರ್ಥಕ ಅಥವಾ ಸಂಶಯಾರ್ಥಕ ಅಧೀನವಾಕ್ಯ, ಅಂಗೀಕಾರಾರ್ಥಕ ಅಧೀನವಾಕ್ಯ, ಇವುಗಳು ಪ್ರಧಾನವಾಕ್ಯಕ್ಕೆ ಮೊದಲೇ ಇರಬೇಕು.

ಉ—1. ಕ್ಷಮೆಗೆ ತೌರುಮನೆಯಾದ ರಾಮನಿಗೂ ದುಷ್ಟನಾದ ಮಾರೀಚನ ಕೆಟ್ಟ ಕೂಗನ್ನು ಕೇಳಿ ಬಹುವಾಗಿ ಆಗ್ರಹಬಂತು.

2. ತಮಗೆ ಜಯವಾಯಿತೆಂದು ಶತ್ರುಗಳು ಕೂಗಿಕೊಳ್ಳುತ್ತಿರಲಿಕ್ಕಾಗಿ, ಪುರಜನರು ಬಹಳವಾಗಿ ಭೀತರಾದರು.

3. ಮೂರ್ಖನಿಗೆ ಬುದ್ಧಿಯನು ನೂರ್ಕಾಲ ಹೇಳಿದರೆ। ಗೋರ್ಕಲ್ಲಮೇಲೆ ಮಳೆಗರೆದರಾಕಲ್ಲು। ನೀರ್ಕುಡಿಯಲಹುದೆ ಸರ್ವಜ್ಞ ॥

ಈ ವಿಧಿಗೆ ಕೆಲವು ಪುರಾತನ ಪ್ರಯೋಗಗಳು ಪ್ರತಿಷೇಧವಾಗಿವೆ. ಇದು ಕವಿಗಳಿಗೆ ಮಾತ್ರ ಸಲ್ಲುವುದು.

ಉ—1. ಶ್ರೀರಾಮಾನಟಿ ಕೌಸ್ತುಭದ್ಯುತಿ ಕಿರತ್ಪುಷ್ಪಾಂಜಲಿ ಕ್ಷೇಪವಕ್ಷೋರಂಗಸ್ಥಿತೆಯಾದ।

2. ಕೋಲುಹವಳದ ಕೋಲುಪವಳದ । ಕೋಲುಚಿನ್ನದ ರನ್ನದ ಕೋಲನ ಹುಯಿದೂ ಪಾಡಿರಮ್ಮ ಬಾಲನ ಗೋಪಾಲನ ॥

(೨) ವಿಶೇಷಣಗಳು ಬಂದಕ್ಕಿಂತಲೂ ಹೆಚ್ಚಾಗಿ ಬಂದಲ್ಲಿ ಅವುಗಳೆಲ್ಲಾ ವಿಶೇಷ್ಯಗಳನ್ನು ವಿಶೇಷಿಸುವವು. ಇದು ಸಾಧಾರಣ ವಿಧಿ. ಆದರೆ ಕೆಲವು ಮುಂದೆ ಬರುವ ವಿಶೇಷಣಗಳನ್ನು ವಿಶೇಷಿಸುವವು.

ಉ—ಸುಲಿದ ಬಾಳೆಯ ಹಣ್ಣಿನಂದದಿ।
ಕಳೆದ ಸಿಗುರಿನ ಕಬ್ಬಿನಂದದಿ।
ಆಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ॥

(೩) ವಿಶಂಕಾವಧಾರಣ ಪ್ರತ್ಯಯಗಳು ಯಾವ ಶಬ್ದದ ಕಡೆಯಲ್ಲಿ ಬರುವವೋ ಆ ಶಬ್ದಕ್ಕೆ ಮಾತ್ರ ಅವು ವ್ಯಾಪನೆಯಾಗುವವು.

ವಿಶಂಕೆಗೆ.

ಉ—೧. ಕೃಷ್ಣನೇಯೋ ಕಂಸನನ್ನು ಕೊಂದ?
೨. ಕೃಷ್ಣನು ಕಂಸನನ್ನೇಯೋಕೊಂದ?
೩. ಕೃಷ್ಣನು ಕಂಸನನ್ನು ಕೊಂದನೇಯೋ?

ಅವಧಾರಣೆಗೆ.

೧. ಕೃಷ್ಣನೇ ಕಂಸನನ್ನು ಕೊಂದ.
೨. ಕೃಷ್ಣ ಕಂಸನನ್ನೇ ಕೊಂದ.
೩. ಕೃಷ್ಣ ಕಂಸನನ್ನು ಕೊಲ್ಲಲೇ ಕೊಂದ.

(೪) 'ಮಾತ್ರ' 'ತಾನೆ' 'ಕೂಡ' 'ಹೊರತು' ಎಂಬ ಶಬ್ದರೂಪ ಪ್ರತ್ಯಯಗಳು ಯಾವ ಶಬ್ದಗಳಿಗೆ ಸಂಬಂಧಿಸುವವೋ ಆ ಶಬ್ದಗಳ ಕೊನೆಯಲ್ಲಿ ಬರುವವು.

"ಮಾತ್ರ" ಕ್ಕೆ

೧. ಉ-ವಿರಾಟ ನಗರದಲ್ಲಿ ಮಾತ್ರ ಭೀಮನು ಕೀಚಕನನ್ನು ಸಂಹರಿಸಿದನು.

೨. ವಿರಾಟನಗರದಲ್ಲಿ ಭೀಮನು ಮಾತ್ರ ಕೀಚಕನನ್ನು ಸಂಹರಿಸಿದನು.

೩. ವಿರಾಟ ನಗರದಲ್ಲಿ ಭೀಮನು ಕೀಚಕನನ್ನು ಮಾತ್ರ ಸಂಹರಿಸಿದನು.

೪. ವಿರಾಟನಗರದಲ್ಲಿ ಭೀಮನು ಕೀಚಕನನ್ನು ಸಂಹರಿಸಿದನು ಮಾತ್ರ.

"ತಾನೆ" ಗೆ.

೧. ವಿರಾಟ ನಗರದಲ್ಲಿ ತಾನೆ ಭೀಮನು ಕೀಚಕನನ್ನು ಸಂಹರಿಸಿದನು.

೨. ವಿರಾಟ ನಗರದಲ್ಲಿ ಭೀಮ ತಾನೆ ಕೀಚಕನನ್ನು ಸಂಹರಿಸಿದನು.

೩. ವಿರಾಟ ನಗರದಲ್ಲಿ ಭೀಮ ಕೀಚಕನನ್ನು ತಾನೆ ಸಂಹರಿಸಿದನು.

೪. ವಿರಾಟ ನಗರದಲ್ಲಿ ಭೀಮನು ಕೀಚಕನನ್ನು ಸಂಹರಿಸಿದ ತಾನೆ.

'ಕೂಡ', ಎಂಬುದಕ್ಕೂ ಹೀಗೆಯೇ ಊಹಿಸಿ ಉಪಹರಿಸಿಕೊಳ್ಳಬಹುದು.

(೫) ಎಕಾರಾಂತ ಒಕಾರಾಂತ ಪ್ರಶ್ನಾರ್ಥಕ ಶಬ್ದಗಳನ್ನು ವಿವೇಚನೆಯಿಲ್ಲದೆ ಪ್ರಯೋಗಿಸುತಾರೆ. ಇದು ತಪ್ಪು. ಮೊದಲ 'ರಾಮ ಬಂದನೆ? ರಾಮ ಬಂದನೊ'? ಎಂಬ ಎರಡು ವಾಕ್ಯಕ್ಕೂ ವ್ಯತ್ಯಾಸ

ವಿದೆ. 'ರಾಮು ಬಂದನೆ?' ರಾಮು ಬಂದದ್ದೂ ಬಾರದದ್ದೂ ಯಾವುದನ್ನೂ ಅರಿಯದೆ ಸಂಗತಿಯನ್ನು ತಿಳಿದುಕೊಳ್ಳಬೇಕೆಂದು ಹೀಗೆ ಕೇಳುತ್ತೇವೆ. 'ರಾಮು ಬಂದನೊ' ರಾಮು ಬರಲಿಲ್ಲವೆಂದು ತಿಳಿದುಕೊಂಡಿರುವಾಗ ಹೀಗೆ ಪ್ರಶ್ನೆ ಕೇಳುತ್ತೇವೆ.

(೬) ಕ್ರಿಯಾ ವಿಶೇಷಣಗಳು ಒಂದು ವಾಕ್ಯದಲ್ಲಿ ಹೆಚ್ಚಾಗಿದ್ದರೆ ಅವುಗಳು ಒಂದೇಕಡೆಯಲ್ಲಿ ಒಟ್ಟೊಟ್ಟಿಗೆ ಸೇರದಹಾಗೆ ಅವುಗಳನ್ನು ವಾಕ್ಯದೊಳಗೆ ಅಲ್ಲಲ್ಲಿ ಹರಡಿ ವಾಚಕರಿಗೆ ಅಸಹ್ಯ ತೋರದಂತೆ ಮಾಡಬೇಕು.

ಉ—ಪಾಂಡವರು ದ್ವಾಪರಾಂತ್ಯದಲ್ಲಿ ಕುರುಕ್ಷೇತ್ರದಲ್ಲಿ ಶತ್ರುಗಳು ನಿಶ್ಶೇಷವಾಗುವ ಹಾಗೆ ಬಹು ಪರಾಕ್ರಮದಿಂದ ಯುದ್ಧಮಾಡಿದರು.

ಇಲ್ಲಿ ಕ್ರಿಯಾ ವಿಶೇಷಣಗಳು ಒಂದೇ ಕಡೆಯಲ್ಲಿ ಸೇರಿಕೊಂಡಿವೆ. ಇದನ್ನು ಸರಿಮಾಡಿ ಬರೆಯೋಣ. "ಶತ್ರುಗಳು ನಿಶ್ಶೇಷವಾಗುವ ಹಾಗೆ ದ್ವಾಪರಾಂತ್ಯದಲ್ಲಿ ಪಾಂಡವರು ಬಹು ಪರಾಕ್ರಮದಿಂದ ಕುರುಕ್ಷೇತ್ರದಲ್ಲಿ ಯುದ್ಧಮಾಡಿದರು."

(೭) ಒಂದು ವಾಕ್ಯದಲ್ಲಿ ವಿಪರೀತಾರ್ಥವನ್ನು ಕೊಡುವ ಅಥವಾ ಸಮಾನಾರ್ಥವನ್ನು ಕೊಡುವ ಶಬ್ದಗಳಾಗಲಿ ಅಧೀನವಾಕ್ಯಗಳಾಗಲಿ ಸಮಾನಸ್ಥಾನದಲ್ಲಿರಬೇಕು.

ವಿಪರೀತಾರ್ಥಕ್ಕೆ.

ಉ—ಚಿಂತೆಯೇ ಮುಪ್ಪು; ಸಂತೋಷವೇ ಯೌವನ

'ಇದನ್ನು ಚಿಂತೆಯೋ ಮುಪ್ಪು ಮುರಿವವ ಸಂತೋಷವೇ' ಎಂದು ಬರೆಯಬಾರದು.

ಸಮಾನಾರ್ಥಕ್ಕೆ.

ಉ—ಸತ್ಯವು ಮಾನವನ್ನುಂಟು ಮಾಡುವುದು.
ಜ್ಞಾನವು ಭಕ್ತಿಯನ್ನುಂಟು ಮಾಡುವುದು.

---

## ೧೧ ನೇ ಅಧ್ಯಾಯ

### II ವಾಕ್ಯದ ಭಾಷಾಶೈಲಿ.

ಇದರಲ್ಲಿ ನಾಲ್ಕು ದೋಷಗಳುಂಟು. ಅವುಗಳನ್ನು ಬಿಡಬೇಕು.

(೧) ಶಬ್ದಾಡಂಬರ.

ಭಾಷೆಯು ವಿಷಯಕ್ಕೆ ತಕ್ಕಹಾಗಿರಬೇಕು. ಕೂಡಿದಮಟ್ಟಿಗೂ ಎಲ್ಲರಿಗೂ ತಿಳಿಯುವ ಹಾಗಿರಬೇಕಲ್ಲದೆ ಅಪೂರ್ವವಾಗಿರುವ ಶಬ್ದಗಳನ್ನು ಪ್ರಯೋಗಿಸಿ ಅರ್ಥವಾಗುವುದು ಕಷ್ಟವಾಗಿರುವಂತೆ ಬರೆಯಬಾರದು. ಅರ್ಥವೇ ಮುಖ್ಯವಾದದ್ದಲ್ಲದೆ ಶಬ್ದಸ್ವರೂಪವು ಮುಖ್ಯವಾದದ್ದಲ್ಲ. ಇತರರಿಗೆ ತಿಳಿಯಲೆಂದು ಬರವಣಿಗೆಯನ್ನು ಬರೆಯುತಾರೆ. ಬರೆದದ್ದು ತಿಳಿಯದ ಹಾಗಾದರೆ ಅದನ್ನು ಬರೆದೂ ಪ್ರಯೋಜನವಿಲ್ಲ. ಸುಲಭವಾದ ಭಾಷೆಯನ್ನು ಪ್ರಯೋಗಿಸಿದರೆ ಎಲ್ಲರಿಗೂ ಸರಾಗವಾಗಿ ಅರ್ಥವಾಗುವುದು. ಇದು ನೆರವೇರಿದರೆ ಬರೆದ ಬರವಣಿಗೆ ಪ್ರಯೋಜನಕಾರಿಯಾಯಿತು; ಇಲ್ಲದಿದ್ದರೆ ವ್ಯರ್ಥವಾಯಿತು. ಆದ್ದರಿಂದ

ಹೇಳುವ ವಿಷಯಕ್ಕೆ ಅನುಸಾರವಾಗಿ ಕೂಡಿದಮಟ್ಟಿಗೂ ಸುಲಭವಾದ ಭಾಷೆಯನ್ನು ಪ್ರಯೋಗಿಸಬೇಕು. ಇದೂ ಅಲ್ಲದೆ ಕ್ಲಿಷ್ಟವಾದ ಶಬ್ದಗಳ ಅರ್ಥ ತಿಳಿಯದ ಹಾಗೆ ಡಂಭವನ್ನೂ ಪಾಂಡಿತ್ಯವನ್ನೂ ತೋರ್ಪಡಿಸುವುದಕ್ಕಾಗಿ ಭಾಷೆಯನ್ನು ಪ್ರಯೋಗಿಸುವುದು ಮತ್ತೂ ಕೇಡು.

(೨) ವ್ಯಾಮಿಶ್ರೋಕ್ತಿ:

ಅರ್ಥವನ್ನು ವಿಶದವಾಗಿಸದೆ ಅಪ್ರಕೃತವಾದ ಶಬ್ದಗಳನ್ನು ಹೆಚ್ಚಾಗಿ ಸೇರಿಸಿ ಗಲಭೆಯಾಗಿ ಬರೆಯುವುದಕ್ಕೆ ವರ್ತುಳೋಕ್ತಿ ಅಥವಾ ವ್ಯಾಮಿಶ್ರೋಕ್ತಿ ಎಂದು ಹೆಸರು.

ಉ—"ಯಾವ ಕೇವಲವಾದಂಥಾ ಮಾನವ ಜನ್ಮವುಂಟೋ ಅಂಥಾ ಈ ಮನುಷ್ಯ ಜನ್ಮವೆಂಬುವಂಥಾದ್ದರಲ್ಲಿ ಯಾವ ಕೇವಲವಾದಂಥಾ ಪಾಪಕರ್ಮ ವೆಂಬುವಂಥಾದ್ದುಂಟೋ ಅಂಥಾ ಪಾಪಕೃತ್ಯವಾಗಿರುವಂಥಾದ್ದನ್ನೂ, ಯಾವ ಕೇವಲವಾದಂಥಾ ಪುಣ್ಯ ಕರ್ಮವೆಂಬುವಂಥಾದ್ದುಂಟೋ ಅಂಥಾ ಪುಣ್ಯ ಕರ್ಮವಾಗಿರುವಂಥಾದ್ದನ್ನೂ, ಕೂಡಾವೆ ಮಾಡುವಂಥಾದ್ದು ಮನುಷ್ಯನ ಯಾವ ಕೇವಲವಾದಂಥಾ ಪೂರ್ವಜನ್ಮದ ವಾಸನಾಫಲವೆಂಬುವಂಥಾದ್ದಾಗಿದೆ, ಎಂಬದಾಗಿ ಕೆಲವರು ಹೇಳುವಂಥಾವರಾಗುತಾರೆ."

ತೊಳಸಂಬಟ್ಟೆಯಾಗಿರುವ ಈ ವಾಕ್ಯದ ಅರ್ಥವನ್ನು ಸುಲಭವಾಗಿ ಕೆಲವು ಮಾತಿನಲ್ಲಿ ಹೇಳಬಹುದು.

ಉ—ಮನುಷ್ಯನು ಈ ಜನ್ಮದಲ್ಲಿ ಮಾಡುವ ಪಾಪಪುಣ್ಯಗಳು ಪೂರ್ವಜನ್ಮದ ಫಲವೆಂದು ಕೆಲವರು ಹೇಳುತಾರೆ.

(೩) ಅಪ್ರಕೃತೋಕ್ತಿ.

ಒಂದೇ ಅರ್ಥವನ್ನು ಕೊಡುವ ಹಲವು ಶಬ್ದಗಳನ್ನು ಅನಾವಶ್ಯಕವಾಗಿ ಪ್ರಯೋಗಿಸುವುದಕ್ಕೆ ಅಪ್ರಕೃತೋಕ್ತಿ ಎಂದು ಹೆಸರು.

ಉ—ಬೆಳ್ಳೀ ಕುದುರೇ ಮೇಲಿನ ಅಶ್ವಾರೋಹಣ ಉತ್ಸವವು ನೋಟಕರಾದ ಜನಸಂಘಗಳಿಗೆ ಬಹು ಲಕ್ಷಣವಾಗಿಯೂ ಸೊಗಸಾಗಿಯೂ ಕಾಣುತಿತ್ತು.

ಮೇಲಿನ ವಾಕ್ಯದಲ್ಲಿ ಕೆಳಗೆ ಗೀಟುಹಾಕಿರುವುದೆಲ್ಲಾ ಅರ್ಥವಿಚಾರದಲ್ಲಿ ಅಪ್ರಕೃತವಾಗಿದೆ. ಇದನ್ನು ಸರಿಮಾಡಿ ಬರೆಯೋಣ.

ಉ—ಬೆಳ್ಳೀ ಕುದುರೇ ಮೇಲಿನ ಉತ್ಸವವು ನೋಟಕರಿಗೆ ಸೊಗಸಾಗಿ ಕಾಣುತಿತ್ತು.

(೪) ಒಂದೇ ಶಬ್ದವನ್ನು ಬೇರೆ ಬೇರೇ ಅರ್ಥದಲ್ಲಿ ಪ್ರಯೋಗಿಸಕೂಡದು.

ಉ—ಆ ಊರನ್ನು ಬಿಟ್ಟು ಪರಸ್ಥಳಕ್ಕೆ ಹೋಗಿ ಅಲ್ಲಿನ ದೇವಸ್ಥಾನದ ನಾಜೋಕಾದ ಕೆಲಸಗಳನ್ನೂ ಮುಖ್ಯವಾಗಿ ಬಾಗಿಲ ವಾಡಗಳಲ್ಲಿ ತೋರಿಸಿರುವ ಪರಸ್ಥಳಗಳನ್ನೂ, ದೃಷ್ಟಿಸಿ ನೋಡುತಾ ಬಂದನು.

ಈವಾಕ್ಯದಲ್ಲಿ 'ಪರಸ್ಥಳ' ವೆಂಬ ಶಬ್ದವನ್ನು ಬೇರೆ ಬೇರೇ ಅರ್ಥದಲ್ಲಿ ಎರಡುಸಾರಿ ಪ್ರಯೋಗಿಸಿದೆ. ಈ ದೋಷ ಪರಿಹಾರವಾಗುವಂತೆ ಬರೆಯೋಣ.

ಉ—ಆ ಊರನ್ನು ಬಿಟ್ಟು ಬೇರೇ ಊರಿಗೆ ಹೋಗಿ ಅಲ್ಲಿನ ದೇವಸ್ಥಾನದ ನಾಜೋಕಾದ ಕೆಲಸಗಳನ್ನೂ ಮುಖ್ಯವಾಗಿ ಬಾಗಿಲವಾಡದ ಪರಸ್ಥಳಗಳನ್ನೂ ದೃಷ್ಟಿಸಿ ನೋಡುತಾ ಬಂದನು.

---

# ಲೇಖನ ಲಕ್ಷಣ

## ೩ನೇ ಭಾಗ

## ೧ನೇ ಅಧ್ಯಾಯ.

### ಕಲಂ ಅಥವಾ ಅನುವಾಕ

೧. ಶಬ್ದಗಳು, ವಚನಗಳು, ಅಧೀನ ವಾಕ್ಯಗಳು, ಇವುಗಳು ಸೇರಿ ಹೇಗೆ ವಾಕ್ಯಗಳಾಗುವವೋ ಹಾಗೆಯೇ ವಾಕ್ಯಗಳೆಲ್ಲಾ ಸೇರಿ ಒಂದು ಪ್ಯಾರ ಅಥವ ಕಲಂ ಆಗುವುದು. ಕಲಂ ಎಂದರೆ ಒಂದು ವಿಷಯವನ್ನು ಕುರಿತು ಲೇಕಣಿ ಓಡಿಸಿ ಒಂದೇ ಉಸಿರಿಗೆ ಬರೆಯುವ ಭಾಗ. ಈ ಕಲಂನಲ್ಲಿ ಪರಿಚ್ಛೇದವಾದ ಒಂದು ವಿಷಯ ಅಥವಾ ಅದರ ಒಂದು ಭಾಗವನ್ನು ಕುರಿತು ಬರೆಯುವರು. ವಾಕ್ಯದಲ್ಲಿ ಅದರ ಭಾಗಗಳೆಲ್ಲಾ ಹೇಗೆ ಒಂದಕ್ಕೊಂದು ಅರ್ಥದಿಂದ ಸೇರಿಕೊಂಡಿರುವವೋ, ಹಾಗೆಯೇ ಒಂದು ಕಲವಿನ ವಾಕ್ಯಗಳು ಅರ್ಥದಲ್ಲಿ ಒಂದಕ್ಕೊಂದು ಸೇರಿಕೊಂಡಿರಬೇಕು. ಒಂದು ಕಲಂನಲ್ಲಿ ಮೂರು ಗುಣಗಳಿರಬೇಕು. ೧ ಏಕವಿಷಯತ್ವ; ೨ ಏಕಸರಣಿ; ೩ ವಾಕ್ಯ ಸ್ವರೂಪದ ಭಿನ್ನತ್ವ.

೨ I **ಏಕವಿಷಯತ್ವ.**

(1) ಒಂದು ಕಲವಿನ ವಾಕ್ಯಗಳೆಲ್ಲಾ ಒಂದೇ ವಿಷಯಕ್ಕೆ ಸಂಬಂಧಿಸಿಕೊಂಡಿರಬೇಕು.

(2) ಒಂದು ಕಲಮಿನಲ್ಲಿ ಒಂದೇ ವಿಷಯಕ್ಕೆ ಸಂಬಂಧಪಟ್ಟ ಮುಖ್ಯವಾದ ಸಂಗತಿಗಳಿರಬೇಕು

(3) ದೂರಸಂಬಂಧವಾದ ವಿಷಯಗಳಿರಕೂಡದು.

(4) ಇಲ್ಲದ ತಪಸೀಲು ಇಲ್ಲದ ವಿವರಣೆ ಇರಕೂಡದು.

II ಏಕಸರಣಿ

(1) ಒಂದು ಕಲಂನಲ್ಲಿ ಉದಹರಿಸಿರುವ ವಿಷಯಕ್ಕೆ ಆ ಕಲಮಿನ ವಾಕ್ಯಗಳೆಲ್ಲಾ ಆದ್ಯಂತವಾಗಿ ಸಂಬಂಧಿಸಿಕೊಂಡಿರಬೇಕು

(2) ಆ ವಾಕ್ಯಗಳ ಪರಸ್ಪರ ಸಂಬಂಧವನ್ನು ತೋರಿಸುವಹಾಗೆ, "ಆದ್ದರಿಂದ", "ಈ ಕಾರಣದಿಂದ", "ಹೀಗೆ", "ಈ ಪ್ರಕಾರ" "ಇದರಿಂದ", "ಇದೇರೀತಿಯಲ್ಲಿ"; ಇವೇ ಮೊದಲಾದ ಸಂಬಂಧ ಶಬ್ದಗಳನ್ನೂ, ವಚನಗಳನ್ನೂ, ಸರಣಿ ಕಿತ್ತುಹೋಗದಹಾಗೆ ಪ್ರಯೋಗಿಸುತ್ತಾ ಬರಬೇಕು.

III ವಾಕ್ಯ ಸ್ವರೂಪ ಭಿನ್ನತ್ವ.

(1) ಒಂದು ಕಲಂನಲ್ಲಿರುವ ವಾಕ್ಯಗಳೆಲ್ಲಾ ಒಂದೇ ಸ್ವಭಾವದ್ದಾಗಿರಬಾರದು. ಇಲ್ಲದಿದ್ದರೆ ಕಿವಿಗೂ ಮನಸ್ಸಿಗೂ ಇಂಪಾಗಿರುವುದಿಲ್ಲ. ಅವುಗಳ ರೀತಿಯು ಭಿನ್ನಿಸಿರಬೇಕು.

(2) ಕಲಮ್ಮಿನ ಮೊದಲ ವಾಕ್ಯವು ಸಂಕ್ಷೇಪವಾಗಿರುವುದು ಉತ್ತಮ.

(3) ಕಲವಿನ ಮುಖ್ಯ ವಿಷಯವನ್ನು ಮೊದಲ ವಾಕ್ಯದಲ್ಲಿ ಸೂಕ್ಷ್ಮವಾಗಿ ತೋರಿಸುವುದು ಒಳ್ಳೆಯದು.

---

## ೪ನೇ ಭಾಗ.

## ಬರವಣಿಗೆಯ ಪ್ರಭೇದಗಳು.

೧. ವಿಶೇಷವಾದ ಪ್ರತಿಭೆಯುಳ್ಳ ಅನೇಕಜನ ಗ್ರಂಥಕರ್ತರು ಉತ್ತಮೋತ್ತಮವಾದ ಅನೇಕ ಗ್ರಂಥಗಳನ್ನು ಬರೆದಿದಾರೆ. ಅಂಥಾ ಯೋಗ್ಯತೆಯುಳ್ಳವರು ಮುಂದಕ್ಕೂ ಬರೆಯಬಹುದು. ಆದರೆ ಬರವಣಿಗೆ ಬರೆಯುವರೆಲ್ಲಾ ಪ್ರತಿಭೆಯುಳ್ಳವರೆಂದು ಹೇಳಲಾಗದು. ಆದ್ದರಿಂದ ಎಲ್ಲರ ಉಪಯೋಗಕ್ಕೂ ಲೇಖನ ನಿಬಂಧನೆಗಳನ್ನು ಏರ್ಪಡಿಸಬೇಕಾಯಿತು. ಪ್ರಾಚೀನರಾದ ಲೇಖಕರ ಗ್ರಂಥಗಳೇ ಈ ನಿಬಂಧನೆಗಳಿಗೆ ಅಸ್ತಿಭಾರ.

೨. ಲೇಖನವನ್ನು ಬರೆಯುವುದಕ್ಕೆ ತಿಳಿದಿರಬೇಕಾದ ಸಲಕರಣಗಳು ಯಾವವೆಂದರೆ:—

(1) ಗ್ರಂಥವನ್ನು ಬರೆಯುವಕಾಲದಲ್ಲಿ ಆ ಭಾಷೆಯನ್ನು ಜನರು ಮಾತನಾಡುವ ರೀತಿ.
(2) ಆಕಾಲದ ಜನರು ಆದರಿಸುವ ಲೇಖನದರೀತಿ.
(3) ಪೂರ್ವಿಕರು ಬರೆದಿರುವ ಗ್ರಂಥದ ಪರಿಚಯ.
(4) ಕೂಡಿದಮಟ್ಟಿಗೂ ಭಾಷೆಯ ಪೂರ್ವಸ್ಥಿತಿ.

(5) ವಿಷಯ ಪರಿಜ್ಞಾನ

(6) ಈ ಐದು ಗುಣಗಳ ಜೊತೆಗೆ ಎಲ್ಲಕ್ಕಿಂತಲೂ ಆಗತ್ಯವಾಗಿ ಕಲಿಯದೇ ಬರುವ ಸಹಜವಾದ ವಿಷಯ ನಿರೂಪಣ ಸಾಮರ್ಥ್ಯ.

ಈ ಮುಖ್ಯವಾದ ಅಂಶಗಳು ಹೆದ್ದಟ್ಟಾಗಿ ಇಲ್ಲಿ ಸೂಚಿಸಲ್ಪಟ್ಟವೆ.

೩. ಲೇಖನಗಳು ಮೂರುವಿಧ.

I ಕಥಾಸರಣಿ, II ವರ್ಣನಸರಣಿ, III ಜಿಜ್ಞಾಸಾಸರಣಿ.

## I ಕಥಾಸರಣಿ

೪. ಹಿಂದೆ ನಡೆದ ವಿಷಯ ಯಾವರೀತಿಯಲ್ಲಿ ಕ್ರಮಕ್ರಮವಾಗಿ ಹೇಗೆನಡೆಯಿತೋ ಹಾಗೆ ಹೇಳುವುದು ಕಥಾಸರಣಿ. ಇದರಲ್ಲಿ ನಾಲ್ಕು ಭೇದಗಳುಂಟು

(1) ಕ್ಷೇಮಸಮಾಚಾರದ ಕಾಗದ, (2) ಸಂಗ್ರಹ, (3) ಜನ್ಮಚರಿತ್ರೆ, (4) ದೇಶಚರಿತ್ರೆ.

### ೫ (1) ಹಿರಿಯರು ಗುರುಗಳು ಇವರಿಗೆ ಬರೆಯುವ ಮರ್ಯಾದೆ.

ತೀರ್ಥರೂಪು..............................ರಿಗೆ ಬಾಲಕ......................ನು ಮಾಡುವ ಸಮಸ್ಕಾರ ...........ಸಂವತ್ಸರದ.................ಮಾಸ............ ಪಕ್ಷ್ಯ..............ತಿಥಿ..............ವಾರದವರಿಗೆ ನಾನು

ಕ್ಷೇಮ; ತಮ್ಮ ಸುಕ್ಷೇಮಕ್ಕೆ ಪತ್ರ ಅಪ್ಪಣೇ ಕೊಡಿಸಬೇಕು. ಸಂ॥

..............................................................................

ಈ ವಿವರ ಚಿತ್ತಕ್ಕೆ ಸರಿತರುವಂತೆ ಮಾಡಬೇಕು.

ಇಂತೀ ಸಾಷ್ಟಾಂಗ ನಮಸ್ಕಾರ ವಿಜ್ಞಾಪನೆ.

## ಚಿಕ್ಕವರಿಗೆ

ಚಿರಂಜೀವಿ ಸಹಸ್ರಾಯುಷ್ಯ..................ನಿಗೆ ........... ..........ಮಾಡುವ ಅನೇಕ ಆಶೀರ್ವಾದ ..................ವರೆಗೆ............... ಕ್ಷೇಮ............ ಆದಿಯಾಗಿ ನಿಮಗಳ ಕ್ಷೇಮಕ್ಕೆ ಬರಸುವುದು........

ಇಂತೀ ಅನೇಕ ಆಶೀರ್ವಾದ.

## ಸಮಾನಸ್ಕಂಧರಿಗೆ

ರಾಜಶ್ರೀ (ಅಥವ) ಮಹಾರಾಜಶ್ರೀ..........ಯವರ ಸನ್ನಿಧಾನಂಗಳಿಗೆ.

ಸೇವಕ............... ....ನು ಮಾಡುವ ನಮಸ್ಕಾರ........................ರವರಿಗೆ ನಾನು ಕ್ಷೇಮ, ತಮ್ಮ ಕ್ಷೇಮಕ್ಕೆ ಪತ್ರ ಅಪ್ಪಣೆ ಕೊಡಿಸಬೇಕು......

ಇಂತೀ ನಮಸ್ಕಾರ.

## ಹಿರಿಯರಾದ ಹೆಂಗಸರಿಗೆ

ಮಾತೃಶ್ರೀ ಸೌಭಾಗ್ಯವತಿಯುವರ ಚ॥ ಗಳಿಗೆ.

ಬಾಲಕ...................ನು ಮಾಡುವ ಸಾಷ್ಟಾಂಗ ನಮಸ್ಕಾರ.

...........ಇಂತೀ ಸಾಷ್ಟಾಂಗ ನಮಸ್ಕಾರ.

## ಕಿರಿಯರಾದ ಹೆಂಗರಿಸಗೆ

ಚಿರಂಜೀ ಸೌಭಾಗ್ಯವತಿ......................ಗೆ.

....................ನು ಮಾಡುವ ಅನೇಕ ಆಶೀರ್ವಾದ

............ಇಂತೀ ಅನೇಕ ಆಶೀರ್ವಾದ.

## ಸಮಾನ ವಯಸ್ಕರಾದ ಹೆಂಗಸರಿಗೆ

ಸೌಭಾಗ್ಯವತಿ....................ಗೆ

...............ರು ಬರಸಿದ ವಿನಯಾರ್ಥ (ಅಥವಾ) ನಮಸ್ಕಾರ.

...............ಇಂತೀ ವಿನಯಾರ್ಥಾ.

## ವಿಧವೆಯರಿಗೆ

ಗಂಗಾ ಭಾಗೀರಥಿ ಸಮಾನರಾದ.................ಗೆ

ಈ ಪ್ರಕಾರ ಅನೇಕ ವಿಧವಾದ ಕಾಗದಗಳ ಒಕ್ಕಣಿಗಳುಂಟು.

ಇಂಥಾ ಕ್ಷೇಮಸಮಾಚಾರದ ಕಾಗದಗಳಲ್ಲಿ ಗೃಹಕೃತ್ಯದ ಸಮಾಚಾರಗಳನ್ನೂ, ಇತರ ವರ್ತಮಾನಗಳನ್ನೂ ಬರೆಯುತಾರೆ. ಇದರಲ್ಲಿ ಭಾಷಾಡಂಬರವೂ ಒಕ್ಕಣೆಯ ವೈಖರಿಯೂ ವಿಶೇಷವಾಗಿರಕೂಡದು.

## ೬. (2) ಸಂಗ್ರಹ

ಸರ್ಕಾರಿ ಕಾಗದಗಳು ವಿಶೇಷವಾಗಿರುವ ಕಟ್ಟನ್ನು ಓದಿ ನೋಡಿಕೊಳ್ಳುವುದಕ್ಕೆ ವ್ಯವಧಾನವಿಲ್ಲದಿರುವ ಮೇಲ್ಪಟ್ಟ ಅಧಿಕಾರಿಗಳ ತಿಳುವಳಿಕೆಗಾಗಿ

ಸಂಗ್ರಹವನ್ನು ಮಾಡುತಾರೆ. ವಿಸ್ತಾರವಾದ ಕೆಲವು ಸಂಗತಿಗಳಿಗೂ, ಕಥೆಗಳಿಗೂ, ಹೀಗೆಯೇ ಸಂಕ್ಷೇಪ ವಾಗಿ ಟಿಪ್ಪಣಿ ಬರೆಯುವುದುಂಟು.

ಹೀಗೆ ಸಂಕ್ಷೇಪ ಟಿಪ್ಪಣಿ ಬರೆಯುವುದರಲ್ಲಿ ಕೆಲವು ನಿಬಂಧನೆಗಳುಂಟು. ಯಾವವೆಂದರೆ:—

(೧) ಸಂಬಂಧಪಟ್ಟ ಕಾಗದಗಳೆಲ್ಲವನ್ನೂ ಮೊದಲು ಓದಿಕೊಳ್ಳಬೇಕು.

(೨) ಮುಖ್ಯವಾದ ಅಂಶವೇನೆಂಬುದನ್ನು ಗೊತ್ತುಮಾಡಿಕೊಳ್ಳಬೇಕು.

(೩) ಪ್ರತಿ ಕಾಗದದ ತಾರೀಖನ್ನೂ ಅದರ ಮುಖ್ಯ ತಾತ್ಪರ್ಯವನ್ನೂ ಟಿಪ್ಪಾಯಿಸಿಕೊಳ್ಳಬೇಕು.

(೪) ಕಾಲಕ್ರಮದಲ್ಲಿ ಯಾವ ಯಾವ ಸಂಗತಿ ಹೇಗೆ ಹೇಗೆ ಜರುಗಿತೋ ಹಾಗೆ ಆಯಾ ಕಾಗದ ಗಳನ್ನು ಜೋಡಿಸಿಕೊಳ್ಳಬೇಕು.

(೫) ಆಯಾ ಕಾಗದದ ಮುಖ್ಯ ತಾತ್ಪರ್ಯವನ್ನು ಬೇರೇ ಕಾಗದದ ಮೇಲೆ ಟಿಪ್ಪಾಯಿಸಿಕೊಳ್ಳಬೇಕು, ಅಥವಾ ಅದನ್ನು ಜ್ಞಾಪಕದಲ್ಲಿಟ್ಟುಕೊಂಡಿರಬೇಕು.

(೬) ಮುಖ್ಯವಾದ ಸಂಗತಿಗೆ ಸಂಬಂಧಿಸದೇ ಇರುವುದನ್ನು ಬಿಟ್ಟು ಉಳಿದವುಗಳ ಸಾರಾಂಶವನ್ನು ತೆಗೆದು ಗುರುತುಮಾಡಿಕೊಳ್ಳಬೇಕು.

(೭) ಹೀಗೆ ಗುರುತುಮಾಡಿಕೊಂಡಿರುವುದೆಲ್ಲ ವನ್ನೂ ಕಾಲಕ್ರಮದಲ್ಲಿ ಮುಖ್ಯವಾದ ಸಂಗತಿಗೆ ಸಂಬಂಧಿಸಿದಹಾಗೆ ಬರೆದುಕೊಳ್ಳಬೇಕು. ಅವುಗಳ ವಿವರಣೆಯನ್ನು ಬಿಟ್ಟುಬಿಡಬೇಕು.

(೮) ಅನಾವಶ್ಯಕವಾದ ವಿವರಣೆಯನ್ನೂ ಕಥೆಯನ್ನೂ ಬಿಟ್ಟುಬಿಡಬೇಕು. ಇದರಲ್ಲಿ ಭಾಷೆ ಸಾಧಾರಣವಾಗಿಯೇ ಇರಬೇಕು.

ಹೀಗೆ ಮಾಡಿ ಆ ಲೇಖನದ ಸಾರಾಂಶವನ್ನು ಬರೆಯಬೇಕು.

## ೭. (3) ಜನ್ಮಚರಿತ್ರೆ.

ಪುರುಷಶ್ರೇಷ್ಠರ ಜನ್ಮಚರಿತ್ರೆಯನ್ನು ಬರೆಯುವಾಗ.

(೧) ಹುಟ್ಟಿದ ವರುಷ, ಮಾಸ, ತಿಥಿ.

(೨) ಹುಟ್ಟಿದ ಸ್ಥಳ.

(೩) ತಾಯಿ ತಂದೆಗಳ ಸ್ಥಿತಿ.

(೪) ಬಾಲ್ಯದ ಸಂಗತಿಗಳು. ವಿದ್ಯಾವ್ಯಾಸಂಗಕ್ರಮ.

(೫) ಜೀವನೋಪಾಯ, ಸಂಪಾದನೆ.

(೬) ಮದುವೆಯಾದ್ದು.

(೭) ಆ ಮನುಷ್ಯ ಪಟ್ಟ ಕಷ್ಟಗಳು.

(೮) ಕೊನೆಗೆ ಜೈಶೀಲನಾಗಿ ಮರ್ಯಾದೆ ಹೊಂದಿದ್ದು.

(೯) ಆ ಮನುಷ್ಯ ಮಾಡಿದ ಲೋಕೋಪಕಾರ.

(೧೦) ಗುಣಾತಿಶಯಗಳು, ಇತರ ಚಿಲ್ಲರೆ ಸಂಗತಿಗಳು.

(೧೧) ಆ ಕಾಲದಲ್ಲಿದ್ದ ಇತರ ಪ್ರಸಿದ್ಧರು.

(೧೨) ನಿರ್ಯಾಣ.

ಈ ಸಂಗತಿಗಳನ್ನು ಸಂಕ್ಷೇಪವಾಗಿ ಬರೆಯ ಬೇಕು.

ಮನುಷ್ಯನ ಚರಿತ್ರೆಯು ಯೋಗ್ಯತಾನುಸಾರವಾಗಿ ಬಾಷೆಯನ್ನು ಸ್ವಲ್ಪ ಬಿಗಿಯಾಗಿ ಮಾಡಬೇಕು. ವಿಶೇಷ ಪುಡಿಪುಡಿಯಾಗಿ ಮಾಡಕೂಡದು.

## ೪. (4) ಚರಿತ್ರೆ

(೧) ಕಾಲಕ್ರಮಾನುಸಾರವಾಗಿ ನಡೆದ ಸಂಗತಿಗಳನ್ನು ಬರೆಯುತ್ತಾ ಬರಬೇಕು.

(೨) ಯಾವ ಯಾವ ಚರಿತ್ರಪುರುಷ ಯಾವ ಕೆಟ್ಟ ಕಲಸ ಒಳ್ಳೇ ಕೆಲಸಗಳನ್ನು ಮಾಡಿದನೋ ಅವುಗಳನ್ನೂ ಅವುಗಳ ಫಲಗಳನ್ನೂ ಬರೆಯಬೇಕು.

(೩) ತಾರೀಖುಗಳನ್ನು ಕೊಡಬೇಕಾದಕಡೆ ಕೊಟ್ಟೇತೀರಬೇಕು.

(೪) ಆಯಾಕಾಲದಲ್ಲಿ ನಡೆದ ಯುದ್ಧಗಳು, ಕದನಗಳು, ಕೌಲುಗಳು, ರಾಜ್ಯಸಂಪಾದನೆಗಳು, ಇವುಗಳನ್ನು ಸಂಕ್ಷೇಪವಾಗಿ ಸೂಚಿಸಬೇಕು.

(೫) ಆಯಾ ದೇಶದ ಜನರ ಸ್ಥಿತಿಯನ್ನೂ ಅವರಿಗೆ ಸಂಭವಿಸಿದ್ದ ಕಷ್ಟವೇನು, ಅದು ನಿವಾರಣೆಯಾದ್ದು ಹೇಗೆ, ರಾಜ್ಯಭಾರ ಕ್ರಮವೇನು, ಜನರು ಅಭಿವೃದ್ಧಿಗೆ ಬಂದದ್ದು ಹೇಗೆ, ಅವರ ಜೀವನೋಪಾಯವೇನು, ಇದೆಲ್ಲವನ್ನೂ ಬರೆಯಬೇಕು.

ಚರಿತ್ರೆಯ ಭಾಷೆ ಇನ್ನೂ ಸ್ವಲ್ಪ ಬಿಗಿಯಾಗಿದ್ದರೂ ಬಾಧಕವಿಲ್ಲ.

## II ವರ್ಣನ ಸರಣಿ.

೯. ಯಾವ ವಿಷಯವನ್ನು ವರ್ಣಿಸಬೇಕೋ ಅಂಥಾದ್ದನ್ನು ಕುರಿತು ಬರೆಯಬೇಕಾದ್ದನ್ನು ಮೂರು ಭಾಗ ಮಾಡಬೇಕು.

(೧) ಸಾಮಾನ್ಯವಿಚಾರ — ವಿಷಯ ಯಾವ ಜಾತಿಗೆ ಸೇರಿದ್ದು, ಅದೇ ಜಾತಿಯ ಇತರ ವಿಷಯಗಳಿಗೂ ಅದಕ್ಕೂ ಇರುವ ಭೇದ, ಸಾಮಾನ್ಯಧರ್ಮ, ಅದರ ಹೆಸರು ಮುಂತಾದ್ದು.

(೨) ವಿಶೇಷವಿಚಾರ — ಅದರ ಭಾಗಗಳು, ಅದರ ಸ್ಥಾನ, ಅದು ಆಗುವುದಕ್ಕೆ ಕಾರಣ, ವೊದಲಾದ್ದು.

(೩) ಗುಣ, ರೀತಿ, ಪ್ರಯೋಜನ, ಮತ್ತು ಲೇಖಕನಿಗೆ ತೋರುವ ಇತರ ಸಂಗತಿಗಳು, ಅಭಿಪ್ರಾಯ ಮುಂತಾದ್ದು.

ವಿಷಯವಿದ್ದ ಹಾಗೆ ವರ್ಣನಾಕ್ರಮ ಭೇದಿಸಬೇಕಾಗುವುದು. ಎಲ್ಲಕ್ಕೂ ಒಂದೇರೀತಿಯೊಂದ ನಿಬಂಧನೆಗಳನ್ನು ಮಾಡಲು ಸಾಧ್ಯವಿಲ್ಲ. ಮೇಲಿನ ಮೂರು ಭಾಗಗಳನ್ನು ಹೆದ್ದಟ್ಟನ ಮೇಲೆ ಹೇಳಿದೆ. ಲೇಖಕರ ಬುದ್ಧಿಯೂ ಪದಾರ್ಥದ ಸ್ವಭಾವವೂ ಇದ್ದ ಹಾಗೆಲ್ಲಾ ಇದು ವ್ಯತ್ಯಾಸವಾಗಬಹುದು.

## III ಜಿಜ್ಞಾಸಾ ಸರಣಿ.

೧೦. ಸಾಧಾರಣವಾಗಿ ಯಾವಾಗಲೂ ಒಂದು ಶಬ್ದ ಅಥವಾ ಅನೇಕ ಶಬ್ದಗಳು, ಒಂದು ವಾಕ್ಯ ಅಥವಾ ಅನೇಕ ವಾಕ್ಯಗಳು ಇವುಗಳ ವಿಷಯವಾಗಿ ಚರ್ಚೆ ಹುಟ್ಟುವುದು. ಆಗ

(೧) ಆ ಶಬ್ದದ ಅಥವಾ ವಾಕ್ಯದ ಅರ್ಥವನ್ನು ಮೊದಲು ವಿಶದವಾಗಿ ಬರೆದುಕೊಳ್ಳಬೇಕು.

(೨) ಆ ವಿಚಾರದಲ್ಲಿರುವ ಭಿನ್ನಾಭಿಪ್ರಾಯಗಳನ್ನು ಬೇರೆ ಬೇರೇ ವಿಂಗಡಿಸಿ ಬರೆಯಬೇಕು.

(೩) ಅಂಥಾ ಅಭಿಪ್ರಾಯಗಳಲ್ಲಿ ಒಂದೊಂದಕ್ಕೂ ಇರುವ ಆಧಾರಗಳನ್ನು ಬರೆಯಬೇಕು. ಮತ್ತು ಅವುಗಳಿಗೆ ಇರುವ ಆಕ್ಷೇಪಣೆಗಳನ್ನು ಬರೆಯಬೇಕು.

(೪) ಅಂಥಾ ಅಭಿಪ್ರಾಯಗಳಲ್ಲಿರುವ ದೋಷಗಳನ್ನು ಒಂದೊಂದಾಗಿ ತೋರಿಸಬೇಕು. ಅಂಥಾ ದೋಷಗಳಿಗೆ ಪರಿಹಾರ ವಿಲ್ಲದಿರುವುದನ್ನು ನಮೂದಿಸಬೇಕು.

(೫) ಈ ಪ್ರಕಾರ ದೋಷಗಳನ್ನು ತೋರಿಸುತಾ ಒಂದೊಂದು ಅಭಿಪ್ರಾಯವನ್ನೂ ಖಂಡಿಸಬೇಕು.

(೬) ಬಲವತ್ತರವಾದ ಪ್ರತಿಕಕ್ಷಿಯ ಅಭಿಪ್ರಾಯವನ್ನು ಚರ್ಚಿಸಿ ಅದರ ದೋಷಗಳನ್ನು ತೋರಿಸಬೇಕು.

(೭) ತರುವಾಯ ನಮ್ಮ ಮುಖ್ಯಾಭಿಪ್ರಾಯ ಅಥವಾ ಸಿದ್ಧಾಂತವನ್ನು ನಿರೂಪಿಸಿ ಅದಕ್ಕಿರುವ ಇತರ ಬಾಧಕಗಳನ್ನು ನಾವು ಊಹಿಸಿ ಬರೆದು ಅವುಗಳಲ್ಲಿರುವ ದೋಷಗಳನ್ನು ನಿರೂಪಿಸಿ ಅದರ ನಿವಾರಣೆಯನ್ನು ಬರೆಯಬೇಕು.

(೮) ತರುವಾಯ ನಮ್ಮ ಸಿದ್ಧಾಂತದ ಸಾಧಕಗಳನ್ನು ಬರೆದು ನಮ್ಮ ಅಭಿಮತವನ್ನು ಸ್ಥಾಪಿಸಬೇಕು.

---

# ೫ ನೇ ಭಾಗ

## ೧ ನೇ ಅಧ್ಯಾಯ.

### ಒಕ್ಕಣೆ—ಅಥವಾ ಶೈಲಿ.

ಬರವಣಿಗೆಯ ರೀತಿಗೆ ಒಕ್ಕಣೆ ಎಂದು ಹೆಸರು. ಯಾವ ವಿಷಯವನ್ನು ಕುರಿತು ಬರೆದಾಗ್ಯೂ ಸರಿಯೆ; ಒಕ್ಕಣೆ ಚೆನ್ನಾಗಿದ್ದರೆ ವಾಚಕರ ಮನಸ್ಸಿಗೆ ಅದು ಅಂಟುವುದು. ಹಾಗಿಲ್ಲದೆ ಸಂಗತಿ ಎಷ್ಟು ಉತ್ತಮ ವಾಗಿದ್ದರೂ ಹೇಳುವ ರೀತಿಯಲ್ಲಿ ಅದರ ಯೋಗ್ಯತೆ ಯನ್ನು ಕೆಡಿಸಬಹುದು. “ಹುಸಿ ಹೇಳಿದರೂ ಹಸ ನಾಗಿ ಹೇಳು” ಎಂದು ಒಂದು ಗಾಧೆ ಇದೆ. ಇದು ಒಕ್ಕಣೆಗೋಸ್ಕರ ಹುಟ್ಟಿದ ಗಾಧೆ ಎಂದು ತಿಳಿಯ ಬೇಕು. ಎಂಥಾ ಅಲ್ಪವಿಷಯವಾದಾಗ್ಯೂ ಅದನ್ನು ಕುರಿತು ಲಕ್ಷಣವಾಗಿ ಬರದರೆ ಅದಕ್ಕೆ ಇಲ್ಲದ ಗೌರವ ಉಂಟಾಗುವುದು. ಎಂಥಾ ಘನವಾದ ಸಂಗತಿಯಾ ದರೂ ಹೇಳುವ ರೀತಿಯಲ್ಲಿ ಅದರ ಯೋಗ್ಯತೆಯನ್ನು ಕೆಡಿಸಬಹುದು. ಪ್ರತಿ ವಾಕ್ಯದ ಒಕ್ಕಣೆಯೂ ಸರಿ ಯಾಗಿದ್ದರೆ ಒಟ್ಟು ಲೇಖನವು ಸರಿಯಾಗಿಯೇ ಆಗು ವುದು. ಬರವಣಿಗೇ ರೀತಿಯಲ್ಲಿ ಈ ಗುಣವನ್ನು ಹುಟ್ಟಿಸುವುದಕ್ಕೆ ಕೆಲವು ವಿಧಿಗಳನ್ನು ಅನುಸರಿಸ ಬೇಕೆಂದು ಗೊತ್ತು ಮಾಡಿದಾರೆ.

೨. ಶೈಲಿಯಲ್ಲಿಯೂ I ಸ್ಪಷ್ಟಶೈಲಿ, II ಪರು ಷಶೈಲಿ, ಅಥವಾ ಬಂಧುರಶೈಲಿ, III ಹಿತಶೈಲಿ ಎಂದು ಮೂರು ಗುಣಗಳಿರಬೇಕು.

I. ಸ್ಪಷ್ಟಶೈಲಿಯಿಂದ ವಿಷಯವನ್ನು ಚೆನ್ನಾಗಿ ತಿಳಿದುಕೊಳ್ಳಬಹುದು. ಅದು ತಿಳಿಯದೇ ಹೋದರೆ ಯಾವ ಪ್ರಯೋಜನವೂ ಉಂಟಾಗುವುದಿಲ್ಲ. ಲೇಖನಕ್ಕೆ ಇದು ಮೊದಲನೇ ಗುಣವಾಗಿದೆ.

II. ಪರುಷಶೈಲಿ ಅಥವಾ ಬಂಧುರಶೈಲಿಯಿಂದ ವಿಷಯವು ಚೆನ್ನಾಗಿ ತಿಳಿಯುವುದೂ ಅಲ್ಲದೆ ಅದು ಮನಸ್ಸಿಗೆ ನಾಟುವುದು. ವಾಕ್ಯ ಬಹು ಜೋರಾಗಿರುವುದು. ಇದರಿಂದ ಹೇಳಿದ ವಿಷಯ ಮರೆಯದ ಹಾಗಾಗುವುದು.

III. ಹಿತಶೈಲಿಯಿಂದ ವಿಷಯವು ಇಂಪಾಗಿ ತೋರಿ ಆನಂದ ಹುಟ್ಟಿ ಆ ಸಂಗತಿಯನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂಬ ಆಶೆ ಹುಟ್ಟುವುದು.

ಹಿಂದೆ ನಡೆದ ಚರಿತ್ರೆಯನ್ನು ತಿಳಿದುಕೊಳ್ಳತಕ್ಕವರಿಗೂ ಶಾಸ್ತ್ರವಿಚಾರ ಮಾಡತಕ್ಕವರಿಗೂ ಮೊದಲನೇ ಗುಣ ಅಗತ್ಯವಾದ್ದು. ಸಭೆಯಲ್ಲಿ ನಿಂತು ಚರ್ಚಿಸಿ ಉಪನ್ಯಾಸಗಳನ್ನು ಮಾಡಿ ಸಭಿಕರ ಮನಸ್ಸನ್ನು ಆಕರ್ಷಣಮಾಡತಕ್ಕವರಿಗೆ ಎರಡನೇ ಗುಣ ಅಗತ್ಯವಾದ್ದು. ಗ್ರಂಥ ವ್ಯಾಸಂಗದಲ್ಲಿ ಅಸಹ್ಯವನ್ನು ಹುಟ್ಟಿಸದೆ ಆಸಕ್ತಿಯನ್ನೂ ಕುತೂಹಲವನ್ನೂ ಹೆಚ್ಚಿಸುವುದಕ್ಕೆ ಮೂರನೇಗುಣ ಅಗತ್ಯವಾದ್ದು.

೩. ಬರವಣಿಗೆಗೆ ಮುಖ್ಯ ಆಧಾರವಾದ್ದು ಉತ್ತಮವಾದ ಭಾಷೆ. ಭಾಷೆಯಲ್ಲಿ I ಶಬ್ದಸೌಷ್ಟವ, II ಸೌಲಭ್ಯ, III ಸಂಕ್ಷೇಪ, IV ಭಾಷಾನೈರ್ಮಲ್ಯ ಈ ಗುಣಗಳಿರಬೇಕು.

ಹಿಂದೆ ದೋಷಪ್ರಕರಣದಲ್ಲಿ ವಿಷಯಗಳನ್ನು ಕುರಿತು ತಕ್ಕಮಟ್ಟಿಗೆ ತೋರಿಸಿದೆ. ಈ ವಿಚಾರದಲ್ಲಿ ವಿಶೇಷ ಸಂಗತಿಗಳನ್ನು ಮುಂದೆ ಸೂಚಿಸಿದೆ.

---

## ೨ ನೇ ಅಧ್ಯಾಯ.

### I ಶಬ್ದ ಸೌಷ್ಟವ

೪. ನಾವು ಪ್ರಯೋಗಿಸುವ ಶಬ್ದಗಳು ಸ್ಪಷ್ಟವಾಗಿರಬೇಕು. ಹೇಗೆಂದರೆ ಕನ್ನಡಭಾಷೆಯನ್ನು ಮಾತೃಭಾಷೆಯಾಗಿ ಉಳ್ಳ ಮೇಲ್‌ತರದ ಜನರು ತಮ್ಮ ಮನೆಯಲ್ಲಿ ಹೇಗೆ ಮಾತನಾಡುತಾರೆಯೋ ಅಂಥಾ ಭಾಷೆಯನ್ನು ಪ್ರಯೋಗೀಸಬೇಕು. ಹಿಂದೆ ವಾಕ್ಯರಚನೆಯಲ್ಲಿಯೂ ವಾಕ್ಯದ ಭಾಷೆಯಲ್ಲಿಯೂ ತೋರಿಸಿರುವ ದೋಷಗಳು ಇದಕ್ಕೆ ಸಂಬಂಧಪಟ್ಟಿವೆ

೫. ಇದರಲ್ಲಿ ಮೂರುಬಗೆ ತಪ್ಪನ್ನು ಮಾಡುತಾರೆ.

(1) ಅರ್ಥ ತಿಳಿಯದೇ ಬೇರೆ ಶಬ್ದವನ್ನು ಪ್ರಯೋಗಿಸುವುದು.

ಉ—1. "ಅದರ ಲೋಪಗಳನ್ನು ಸರಿಮಾಡಬೇಕು."
ಇಲ್ಲಿ ಲೋಪವೆಂದರೆ ಇಲ್ಲದಿರುವುದು.

ಇಲ್ಲದ್ದನ್ನು ಸರಿಮಾಡುವುದು ಹೇಗೆ? ಇದು ಅಪ್ರಸಿದ್ಧ. 'ಲೋಪ' ಕ್ಕೆ ಬದಲಾಗಿ ದೋಷ ಎಂದು ಬರೆಯಬೇಕು. ದೋಷವೆಂದರೆ ತಪ್ಪು. ತಪ್ಪನ್ನು ಸರಿಮಾಡಬಹುದು. ಲೋಪವೆಂದರೆ ಇಲ್ಲದ್ದು. ಇಲ್ಲದ್ದನ್ನು ಸರಿಮಾಡುವುದಕ್ಕಾಗುವುದಿಲ್ಲ.

2. "ಗಂಭೀರರಾದವರಿಗೆ ಕೆಟ್ಟಮಾತನಾಡುವುದು ಅಲಾಘವ."
ಇಲ್ಲಿ ಲಾಘವವೆಂದರೆ ತೂಕವಿಲ್ಲದ್ದು, ಹಗುರವಾದ್ದು. ಅಲಾಘವ ವೆಂದರೆ ಹಗುರವಲ್ಲದ್ದು, ಅಥವಾ ತೂಕವುಳ್ಳದ್ದು, ಅಥವಾ ಗಂಭೀರವಾದ್ದು. ಗಂಭೀರರಾದವರಿಗೆ ಕೆಟ್ಟಮಾತು ಗಂಭೀರವಾದ್ದು ಅಥವಾ ಮಾನವಾದ್ದು ಎಂದಹಾಗಾಯಿತು. ಇದು ತಪ್ಪು. ಇಲ್ಲಿ ಅಲಾಘವ ಎನ್ನುವುದಕ್ಕೆ ಬದಲಾಗಿ ಲಾಘವ ಎಂದಿರಬೇಕು.

3. 'ಅಪೂರ್ಯ' ಎನ್ನುವುದು ತಪ್ಪು. ಇದು 'ಅಪೂರ್ವ' ಎಂದಿರಬೇಕು. 'ಉಚ್ಛ್ರಾಯ' ತಪ್ಪು. 'ಉತ್ಸವ' ಎಂದಿರಬೇಕು.

4. 'ಚಿತ್ರಾಂಗಣೆ' ಎನ್ನುವುದು ತಪ್ಪು. 'ಚಿತ್ರಾಂಗದೆ' ಎಂದಿರಬೇಕು.

5. 'ಅನಂತರಕ್ಕೆ' 'ನಂತರ' ಎಂದು ಬರೆಯಬಾರದು. ಇಂಥಾ ಪ್ರಯೋಗಗಳನ್ನು ತ್ಯಜಿಸಬೇಕು. ಈ ತಪ್ಪು ಮರಾಟಿಯಿಂದ ಬಂದದ್ದು.

೬. (2) ದ್ವಂದ್ವಾರ್ಥ ಶಬ್ದಗಳನ್ನು ಪ್ರಯೋಗಿಸಬಾರದು.

ಉ—"ರಾಮ ನುಡಿಸುತಾ ಇದ್ದ ವೀಣೆಯನ್ನು ಕೇಳಿದೆಯಾ?"
ಇಲ್ಲಿ 'ಕೇಳು' ಎನ್ನುವ ಶಬ್ದಕ್ಕೆ ಎರಡರ್ಥವಿದೆ. ವೀಣೆಯನ್ನು ನುಡಿಸುವಾಗ ಹೊರಡುವ ಗಾನಶಬ್ದವನ್ನು ಕೇಳಿ ಆನಂದಪಡುವುದು ಎಂದು ಒಂದರ್ಥ. ಮತ್ತು ವೀಣೆಯನ್ನು ಕೊಡೆಂದು ಕೇಳುವುದು ಒಂದರ್ಥ. ಇಂಥಾ ಸಂದರ್ಭದಲ್ಲಿ ಮೊದಲನೇ ಅರ್ಥ ಬೇಕಾದರೆ 'ವೀಣೆ ನುಡಿಸುವುದನ್ನು ಕೇಳಿದೆಯಾ?' ಎನ್ನಬೇಕು.

ಎರಡನೇ ಅರ್ಥ ಬೇಕಾದರೆ, 'ಹೀಗೆಯನ್ನು ಕೊಡೆಂದು ಕೇಳಿದೆಯು?' ಎನ್ನಬೇಕು.

ಇಂಥಾ ಸಂದಿಗ್ಧಪ್ರಯೋಗವನ್ನು ಮಾತಬಾರದು.

೭. (3) ಪ್ರತಿಪದಾರ್ಥವನ್ನು ಹೇಳುವಾಗ ಕೆಲವರು ಸುಲಭವಾದ ಶಬ್ದಕ್ಕೆ ಕ್ಲಿಷ್ಟಶಬ್ದವನ್ನೂ, ಕೆಲವರು ತಪ್ಪು ಮಾತನ್ನೂ ಅರ್ಥವೆಂದು ಹೇಳುವರು.

ಉ—ಹುಲಿಯು ಕತ್ತಲೆಯಲ್ಲಿ ನಾನು ಮೊದಲಾದವರ ಮೇಲೆ ಹಾರಿತು.

'ಹುಲಿಯು'—ವ್ಯಾಘ್ರವು; 'ಕತ್ತಲೆಯಲ್ಲಿ' — ಗಾಢಾಂಧಕಾರದಲ್ಲಿ; 'ನಾನು ಮೊದಲಾದವರ ಮೇಲೆ' — ಅಸ್ಮದಾದಿಗಳ ಮೇಲೆ; 'ಹಾರಿತು'—ಲಂಘಿಸಿತು.

ಇದು ತಪ್ಪು. ಯಾವುದಕ್ಕೆ ಅರ್ಥ ಬರೆಯುತ್ತೇವೋ ಅಂಥಾ ಶಬ್ದಕ್ಕಿಂತ ಅರ್ಥವು ಸುಲಭವಾಗಿರಬೇಕು: ಕ್ಲಿಷ್ಟವಾಗಿರಬಾರದು.

---

## ೩ ನೇ ಅಧ್ಯಾಯ

### II ಸೌಲಭ್ಯ.

೮. ಕನ್ನಡಿಯಲ್ಲಿ ಕಾಣುವ ನಮ್ಮ ಮುಖವು ಹೇಗೆ ನಿಜವಾದ ನಮ್ಮ ಮುಖದ ಪ್ರತಿಬಿಂಬವಾಗಿದೆಯೋ ಹಾಗೆಯೇ ನಾವು ಬರೆಯುವ ಮಾತು ನಮ್ಮ ಅಭಿಪ್ರಾಯದ ಪ್ರತಿಬಿಂಬವಾಗಿದೆ. ಹೀಗೆಂದರೆ ನಮ್ಮ

ಮನಸ್ಸಿಗೆ ಏನು ತೋರುವುದೋ ಅದನ್ನು ನಮ್ಮ ಬರವಣಿಗೆ ತೋರಿಸುವುದು. ಕನ್ನಡಿ ನಿರ್ಮಲವಾಗಿದ್ದರೆ ಮುಖ ಚೆನ್ನಾಗಿ ಕಾಣುವುದು. ಅದು ಮಸಕಾಗಿದ್ದರೆ ಮುಖ ಚೆನ್ನಾಗಿ ಕಾಣುವುದಿಲ್ಲ. ಭಾಷೆ ಸುಲಭವಾಗಿದ್ದರೆ ನಮ್ಮ ಮನಸ್ಸಿಗೆ ತೋರಿದ್ದು ಚೆನ್ನಾಗಿ ಪ್ರಕಾಶವಾಗುವುದು.

ಕೆಲವರು ಕಠಿಣವಾದ ಸಂಸ್ಕೃತ ಶಬ್ದಗಳನ್ನು ವಿಶೇಷವಾಗಿ ಕನ್ನಡದಲ್ಲಿ ಪ್ರಯೋಗಿಸುವರು. ಇನ್ನು ಕೆಲವರು ಕಷ್ಟಪಟ್ಟು ಈಗ ಪ್ರಯೋಗದಲ್ಲಿಲ್ಲದ ಹಳೆಗನ್ನಡ ಶಬ್ದಗಳನ್ನು ಹುಡುಕಿ ಹುಡುಕಿ ಆರಿಸಿ ಇರಿಸಿಕೊಂಡಿದ್ದು ತಮ್ಮ ಬರವಣಿಗೆಯಲ್ಲಿ ಅವುಗಳನ್ನು ಪ್ರಯೋಗಿಸುವರು. ಇವೆರಡೂ ತಪ್ಪು. ಯಾವ ಶಬ್ದವು ಉಚ್ಚಾರಣೆಗೆ ಸುಲಭವಾಗಿ, ಕಿವಿಗೆ ಇಂಪಾಗಿ, ಸಾಧಾರಣ ಜನರಿಗೂ ಕೂಡ ತಿಳಿಯತಕ್ಕದ್ದಾಗಿ, ಮತ್ತು ನಮ್ಮ ಅಭಿಪ್ರಾಯವನ್ನು ಕುಂದಕವಿಲ್ಲದೇ ತಿಳಿಸುವಂಥಾದ್ದಾಗಿರುವುದೋ ಅಂಥಾ ಶಬ್ದವನ್ನು ಎಲ್ಲರೂ ಅಂಗೀಕರಿಸಬೇಕು; ಅವುಗಳನ್ನೇ ಗ್ರಂಥಗಳಲ್ಲಿಯೂ ಪ್ರಯೋಗಿಸಬೇಕು.

ಆದರೆ ಬರವಣಿಗೆಯ ವಿಷಯಸ್ವಭಾವದಿಂದ ಕೆಲವು ಪರಿಭಾಷಾ ಶಬ್ದಗಳ ಪ್ರಯೋಗ ಅಗತ್ಯವಾಗಿದ್ದಲ್ಲಿ, ಆಗಮಾತ್ರ ಗ್ರಂಥಕರ್ತರು ಅಗತ್ಯವಾದ ಕಡೆ ನೂತನವಾದ ಭಾಷೆಯನ್ನು ಅಂಗೀಕರಿಸಬಹುದು. ಆಗಲೂ ರೂಢಿಯನ್ನೂ ಪ್ರಯೋಗವನ್ನೂ ಬಿಟ್ಟು ಹೋಗಕೂಡದು. ಈ ಪ್ರಕಾರ ಶಬ್ದಪ್ರಯೋಗದ

ವಿಚಾರದಲ್ಲಿ ಕೆಲವು ನಿಬಂಧನೆಗಳನ್ನು ಅನುಸರಿಸಬೇಕು.

೯. (1) ರೂಢಿಯಾದ ಕನ್ನಡ ಶಬ್ದವಿರುವಾಗ ಅದಕ್ಕೆ ಬದಲಾಗಿ ಸಂಸ್ಕೃತ ಶಬ್ದವನ್ನು ಅನಾವಶ್ಯಕವಾಗಿ ಪ್ರಯೋಗಿಸಕೂಡದು.

ಉ—1 ನಾನು ಗೃಹವನ್ನು ಬಿಟ್ಟು ಹೊರಟೆ; ಒಬ್ಬ ಚತುರ್ಥನು ದಂಡಧಾರಿಯಾಗಿ ನನಗೆ ಅಭಿಮುಖನಾದನು.

ಇಲ್ಲಿ ಅನಾವಶ್ಯಕವಾದ ಸಂಸ್ಕೃತ ಶಬ್ದಗಳನ್ನು ಬಿಟ್ಟು ಅವುಗಳಿಗೆ ಬದಲಾಗಿ ಲಲಿತವಾದ ಶಬ್ದಗಳನ್ನು ಪ್ರಯೋಗಿಸಬಹುದು.

'ನಾನು ಮನೆಯನ್ನು ಬಿಟ್ಟು ಹೊರಟೆ; ಒಬ್ಬ ಶೂದ್ರನು ಕೋಲನ್ನು ಹಿಡಿದುಕೊಂಡು ನನ್ನೆದುರಿಗೆ ಬಂದನು.'

ಉ—2. 'ನಮ್ಮ ತಮ್ಮನು ಶ್ಮಶ್ರುವನ್ನು ಬಿಡಿಸಿದಾನೆ.' ಇದನ್ನು ಸುಲಭವಾಗಿ ಬರೆಯೋಣ. ನಮ್ಮ ತಮ್ಮನು ಮೀಸೇ ಬಿಡಿಸಿದಾನೆ.

ಉ—3. ಅಂತಹ, ಇಂತಹ, ಎಂಬುವುದನ್ನು ಅಂಥಾ ಇಂಥಾ ಎಂಬುವುದಕ್ಕೆ ಬದಲಾಗಿ ಪ್ರಯೋಗಿಸುವುದು ಅತಿ ಪಾಂಡಿತ್ಯವಾಗಿದೆ.

೩. (2) ಆನ್ವೀಕ್ಷಿಕ (abstract) ಶಬ್ದಗಳಿಗೆ ಬದಲಾಗಿ ಸಮವೇತ (concrete) ಶಬ್ದಗಳನ್ನು ಸಾಧ್ಯವಾದ ಮಟ್ಟಿಗೂ ಪ್ರಯೋಗಿಸಬೇಕು.

ಆನ್ವೀಕ್ಷಿಕಶಬ್ದ ಅಥವಾ ಭಾವನಾಮಗಳು ಗುಣಸಮುದಾಯವನ್ನು ತೋರಿಸುವವು. ಇಂಥಾ

ಶಬ್ದಗಳು ಯಾವಾಗಲೂ ಸಂಸ್ಕೃತ ಶಬ್ದಗಳಾಗಿಯೇ ಇರುವವು. ಸಮವೇತಶಬ್ದವು ಅಂಥಾ ಗುಣಸಮುದಾಯವನ್ನು ಒಳಗೊಂಡಿರುವ ಪದಾರ್ಥಗಳನ್ನು ತೋರಿಸುವುದು. ಇಂಥಾ ಶಬ್ದಗಳು ವಿಶೇಷವಾಗ ದೇಶ್ಯಶಬ್ದವಾಗಿರುವವು.

ಉ—ಅನ್ವಕ್ಷಿಕಕ್ಕೆ—ಧಾವಳ್ಯ, ದ್ರವ, ಭೂಷಣ.
ಸಮವೇತಕ್ಕೆ—ಸುಂಣ, ನೀರು, ಹಾರ.

ಆನ್ವಕ್ಷಿಕ ಶಬ್ದವು ಗುಣವನ್ನು ಮಾತ್ರ ತೋರಿಸುವುದು. ಈ ಗುಣವು ಯಾವ ಯಾವ ವಸ್ತುಗಳಲ್ಲಿದೆಯೋ ಅವೆಲ್ಲವನ್ನೂ ನೆನಿಸಿಕೊಂಡು ಬುದ್ಧಿಯು ಶ್ರಮಪಟ್ಟು ಅಂಥಾ ವಸ್ತುಗಳಿಂದ ಆ ಗುಣವನ್ನು ಬೇರೇ ಮಾಡಿದಂತೆ ತಿಳಿದುಕೊಳ್ಳಬೇಕು. ಆದರೆ ಸಮವೇತ ಹಾಗಲ್ಲ. ಆ ಗುಣ ಇರುವ ಪದಾರ್ಥವು ತಟ್ಟನೆ ನಮ್ಮ ಮನಸ್ಸಿಗೆ ಬರುವುದು. ತಿಳುವಳಿಕೆಗೆ ಮೊದಲನೇದರಲ್ಲಿ ಕಷ್ಟ ಹೆಚ್ಚು. ಎರಡನೇದರಲ್ಲಿ ಸೌಲಭ್ಯ ಹೆಚ್ಚು. ಶಾಸ್ತ್ರವಿಚಾರಗಳಲ್ಲಿ ಮೊದಲನೇ ವಿಧದ ಶಬ್ದಗಳನ್ನು ಪ್ರಯೋಗಿಸಲೇಬೇಕು. ವರ್ಣನೆಯಲ್ಲಿ ಎರಡನೇವಿಧದ ಶಬ್ದಗಳು ಹೃದಯಂಗಮವಾಗಿರುವವು.

---

## ೪ ನೇ ಅಧ್ಯಾಯ.

### III ಸಂಕ್ಷೇಪ.

೧. ಕಡಮೆಯಾದ ಶಬ್ದಗಳಿಂದ ಹೆಚ್ಚಾದ ಅರ್ಥವನ್ನು ತೋರಿಸಬೇಕು. ಗಾದೆಗಳಲ್ಲಿ ಈ ಗುಣ

ವಿದೆ. ಭಾಷೆಯು ಪೂರ್ತಿಯಾಗಿ ಸ್ವಾಧೀನವಾಗಿರ ತಕ್ಕವರಿಗೆ ಮಾತ್ರ ಇದು ಸಾಧ್ಯವಲ್ಲದೆ ಇತರರಿಗೆ ಸಾಧ್ಯವಿಲ್ಲ. ವರ್ಣನೆಯು ಇದಕ್ಕೆ ವಿರೋಧವಾದ್ದು. ಸಂಕ್ಷೇಪಶೈಲಿಯು ಸರ್ವಜ್ಞನ ಪದಗಳಲ್ಲಿ ಸಿದ್ಧ ವಾಗಿದೆ.

ಗಾದೆಗೆ—೧ ತಾಯಂತೆ ಮಗಳು, ನೂಲಂತೆ ಸೀರೆ.

ಸರ್ವಜ್ಞ—೨ ಅಡಿಹುಸಿಯಲು ಹೊಲ್ಲ; ಕೂಡಿತಪ್ಪಲು<br>ಹೊಲ್ಲ । ಕಾಡುವನಂಟ ಬರ ಹೊಲ್ಲ<br>ಪೆಂಣಿಗೆ। ಕಾಡನುಡಿಹೊಲ್ಲ ಸರ್ವಜ್ಞ ॥

೩—ಹೆಂಗಸು ಮನೇ ಕೆಲಸವನ್ನೆಲ್ಲಾ ಬೇಸರಪಡದೇ ಮಾಡಬೇಕು; ಮತ್ತೊಬ್ಬರಿಗೆ ಹೇಳಿಮಾಡಿಸುವ ಬಿಂಕಯಾಕೆ? ಪಾತಿವ್ರತ್ಯವಿದ್ದರೆ ಸಾಕು; ಒಡವೆಯಾಕೆ? ಹರಿದ ಬಟ್ಟೆಯನ್ನು ಹೊಲಿಯುವುದಕ್ಕೆ ಬಂದರಾಯಿತು; ಕಸೂತಿ ಎಂದು ಬಟ್ಟೆ ತೂತುಮಾಡುವ ನಾಜೋಕಿನಿಂದೇನು? ಹಾಡನ್ನು ರಾಗವಾಗಿಯೂ ಸ್ಪಷ್ಟವಾಗಿಯೂ ಹೇಳಿದರೆ ಚೆನ್ನ; ಸರಿಗಮ ಎಂದ ಸದ್ದುಮಾಡುತಾ ತಲೇ ಅಳ್ಳಾಡಿಸುವ ಶಾಸ್ತ್ರದಿಂದೇನು? ನಿಶ್ಚಲವಾದ ಮನಸ್ಸಿರಬೇಕು; ಗೋಷ ಯಾಕೆ? ಬಡವರನ್ನು ಆದರಿಸುವುದು ಉತ್ತಮ; ಹೆಮ್ಮೆಯಿಂದ ಬಂದ ಭಾಗ್ಯವೇನು?

೧೦. (೧) ಭಾಷಾಡಂಬರ, (೨) ವ್ಯಾಪಿಶ್ರೋಕ್ತಿ, (೩) ಅಪ್ರಕೃತೋಕ್ತಿ, (೪) ಪುನರುಕ್ತಿ, ಈ ದೋಷಗಳಿಂದ ಸಂಕ್ಷೇಪ ಶೈಲಿ ಕೆಡುವುದು.

---

## ೫ ನೇ ಅಧ್ಯಾಯ

### IV ಭಾಷಾನೈರ್ಮಲ್ಯ

೧೧. ಭಾಷಾನೈರ್ಮಲ್ಯವು ನಾಲ್ಕು ವಿಧವಾದ ಪ್ರಯೋಗದಿಂದ ಕೆಡುವುದು.

(1) ಕಠಿಣೋಕ್ತಿಪ್ರಯೋಗ—

ಉ—ಇಂಥಾ ಮಾತನ್ನು ಯಾಕೆ ಬೊಗಳುತೀರಿ?
ಹಾಳ ಹರಟೆಯನ್ನು ಬಿಟ್ಟು ಬಾಯಮುಚ್ಚಿ.

ಬೊಗಳು, ಹಾಳಹರಟೆ, ಬಾಯಮುಚ್ಚಿ--ಇವು ಕಠಿಣೋಕ್ತಿ.

(2) ಅಲ್ಪಭಾಷಾ ಪ್ರಯೋಗ—

ಉ—ಅಯ್, ಕೊಡಬೇಕ್ ಕಣಾ, ಇಲ್ಲ ಅಂಜೇವ ಈ ಬುಂಡೆ ಇರಾಗಂಟ? ಬರಾದುಬತ್ತದೆ, ಆಗಾದು ಆಗತದೆ ಕಯಲೋ.

ಇದನ್ನು ಸರಿಯಾದ ಭಾಷೆಯಲ್ಲಿ ಬರೆಯೋಣ.

ಅಯ್ಯೋ, ಕೊಡಬೇಕುಕಣಯ್ಯ, ಇಲ್ಲ ಅಂದೇವೆ ಈ ತಲೆ ಇರುವವರೆಗೆ? ಬರುವುದು ಬರುತ್ತೆ, ಆಗುವವುದು ಆಗುತ್ತೆ ಕಣೆಲೈ.

(3) ಈಗಿನ ಪ್ರಯೋಗದಲ್ಲಿಲ್ಲದ ಶಬ್ದಗಳ ಪ್ರಯೋಗ

ಉ—ಬೊಂಕು, ಹಳುವ, ರೆಂಚೆಯ, ಕಿತ್ತಡಿ, ಆಕೆವಾಳ, ಹದುಳಿಗ—ಇವೇ ಮೊದಲಾದ್ದು.

(4) ಗ್ರಾಮ್ಯಪ್ರಯೋಗ—

ಉ—ಮಾಡಕಂಡದಾನೀ; ಹೊತಾರೆ; ಇಲ್ಲಕೊಸೊ,ಬತ್ತದೆ, ಸ್ವಾಮಿಗೋಳು ಬಂದವರೆ; ಏ ತಮ್ಮ ಬೀಗರು

ಹೊಡಕೋತ ಬಡಕೋತ ಬಂದಾರೆ, ಎಲ್ಲರೂ ಅರಿ
ಮಾಡಿಕೊಳ್ಳಿರಿ.

(5) ಅನ್ಯದೇಶ್ಯ ಶಬ್ದಗಳ ಪ್ರಯೋಗ.

ಸರ್ಕಾರಿ ಕಾಗದಪತ್ರಗಳಲ್ಲಿ ಹಿಂದುಸ್ಥಾನಿ ಶಬ್ದಗಳೂ, ಇಂಗ್ಲಿಷ್ ಶಬ್ದಗಳೂ ವಿಶೇಷವಾಗಿ ಪ್ರಯೋಗದಲ್ಲಿವೆ. ಅವುಗಳಲ್ಲಿ ಕೆಲವು ರೂಢಿಗೆಬಂದು ಪ್ರಯೋಗದಲ್ಲಿವೆ.

ಉ—ಕಚೇರಿ, ಕೋರ್ಟು, ಇತ್ತಿಲ್ಲೆ, ಮೊಕದ್ದಮೆ, ದಾವಾ, ಅರ್ಜಿ, ಡೈರಿ, ಲಿಮಿಟೇಶನ್, ಫರಮಾಯಿಷಿ, ದಾಮಾಯಿಷ್, ಬಿನಾತಿ, ಅವ್ವಲ್, ದುಯಂ, ಸಿಯಂ, ಹಿಸ್ಸೆ, ರೈತ, ಜಮೀನು, ಪೈಮಾಯಿಷಿ, ಸಲಾಂ, ಟೆಲಿಗ್ರಾಫ್, ಟೆಲಿಫೋನ್, ಜಹಜು, ದರಬಾರು, ದವಾಲಿ, ಚಾವಟಿ ಆಕ್ಟು, ನೋಟೀಸು, ಸರ್ವೆ, ವಾರಂಟು, ಅತ್ತರು, ಮೈದಾನ, ಸಿಪಾಯಿ, ಇವೇ ಮೊದಲಾದ ಅನೇಕ ಶಬ್ದಗಳನ್ನು ದಿನಚರಿಯಲ್ಲಿಯೂ ಪ್ರಯೋಗಿಸುತ್ತೇವೆ. ಇವುಗಳಿಗೆ ಬದಲಾಗಿ ದೇಶ್ಯಶಬ್ದಗಳನ್ನಾಗಲಿ, ತತ್ಸಮ ಶಬ್ದಗಳನ್ನಾಗಲಿ ಪ್ರಯೋಗಿಸಲು ಯತ್ನಮಾಡಿದರೆ. ಶಬ್ದಾಡಂಬರ ಕೇವಲ ಹೆಚ್ಚಾಗಿ ಅಪಹಾಸ್ಯಕ್ಕೆ ಕಾರಣವಾಗುವುದು. ಹೀಗೆ ರೂಢಿಗೆ ಬಂದಿರುವ ಶಬ್ದಗಳನ್ನು ಪ್ರಯೋಗಿಸಬಹುದು.

ಆದರೆ ಇಂಗ್ಲಿಷ್ ಓದಿದ ಕೆಲವರೂ ಮತ್ತು ಇಂಗ್ಲಿಷ್ ಬಾರದೇ ಇದ್ದಾಗ್ಯೂ ಕಚೇರಿಗಳಲ್ಲಿ ಸರ್ಕಾರದ ಉದ್ಯೋಗ ಮಾಡುವರೂ ಸಹಾ ಅನಾವಶ್ಯಕ

ವಾಗಿ ಅನ್ಯದೇಶ್ಯ ಶಬ್ದಗಳನ್ನು ಪ್ರಯೋಗಿಸಿ ಉತ್ತಮವಾದ ದೇಶ್ಯ ಶಬ್ದಗಳನ್ನೂ ರೂಢಿಯಲ್ಲಿರುವ ಸಂಸ್ಕೃತ ಸಬ್ದಗಳನ್ನೂ ತ್ಯಜಿಸುವರು. ಇದು ತಪ್ಪು.

ಉ—೧. ನಮ್ಮ ಫಾದರಿಗೆ ಲೆಟರು ಬರೆದಿದ್ದೆ. ಅವರು ಮನಿಯನ್ನು ರೆಮಿಟ್ ಮಾಡಲಿಲ್ಲ. ಅವರಲ್ಲಿ ಮನಿ ಇರಲಿಲ್ಲವಂತೆ. ಈ ದಿವಸ ಮಾರ್ನಿಂಗು ಟ್ರೈನಲ್ಲಿ ನಮ್ಮ ಸರ್ವೆಂಟು ಅರೈವ್ ಆಗಿಬಂದ. ನಮ್ಮ ಬ್ರದರಿಗೆ ಫೀವರು ಬಂದಿತ್ತಂತೆ. ಆ ಕಣ್ಫ್ಯೂಷನಲ್ಲಿ ಮನಿ ಕಳುಹಿಸುವುದನ್ನು ಫರಗೆಟ್ಟು ಮಾಡಿಬಿಟ್ಟರಂತೆ. ಈ ನ್ಯೂಸನ್ನು ಅವನು ತಂದ. ಇದರಲ್ಲಿ ಟ್ರೂತು ಎಷ್ಟೋ ಫಾಲ್‌ಸುಡ್ಡು ಎಷ್ಟೋ ಗೊತ್ತಿಲ್ಲ.

ಇದನ್ನು ಸರಿಯಾಗಿ ಬರೆಯೋಣ.

ನಮ್ಮ ತಂದೆಗಳಿಗೆ ಕಾಗದ ಬರೆದಿದ್ದೆ. ಅವರು ಹಣವನ್ನು ಕಳುಹಿಸಲಿಲ್ಲ. ಅವರಲ್ಲಿ ಹಣವಿರಲಿಲ್ಲವಂತೆ. ಈ ದಿವಸ ಬೆಳಗಿನ ಟ್ರೈನಲ್ಲಿ ನಮ್ಮ ಆಳು ಬಂದು ತಲಪಿದ. ನಮ್ಮ ಅಂಣನಿಗೆ ಜ್ವರ ಬಂದಿತ್ತಂತೆ. ಆ ಗಾಬರಿಯಲ್ಲಿ ಹಣ ಕಳುಹಿಸುವುದನ್ನು ಮರೆತುಬಿಟ್ಟರಂತೆ. ಈ ವರ್ತಮಾನವನ್ನು ಅವನು ತಂದ. ಇದರಲ್ಲಿ ನಿಜವೆಷ್ಟೊ ಸುಳ್ಳು ಎಷ್ಟೊ ಗೊತ್ತಿಲ್ಲ.

ಉ—೨. ಖಾಮಾಖಾಂ ಮನೇಕಾಮಗಾರಿಗೆ ಮರುಮಾಡಬೇಕೆಂದು ನಾನು ಹುಕ್ಕುಂ ಮಾಡಿದ್ದೆ, ಸದರಿ ಹುಕ್ಕುಂ ಜೋಪೋಜೇಬು ದರೋಬಸ್ತು ನೌಕರರೂ ಹಾಜರಾದರು.

'ಖಂಡಿತವಾಗಿ ಮನೇಕೆಲಸಕ್ಕೆ ಆರಂಭಮಾಡಬೇಕೆಂದು ನಾನು ಅಪ್ಪಣೇಮಾಡಿದ್ದೆ. ಆ ಅಪ್ಪಣೇಪ್ರಕಾರ ಎಲ್ಲಾ ಆಳುಗಳೂ ಬಂದರು.'

---

## ೬ ನೇ ಭಾಗ

## ೧ ನೇ ಅಧ್ಯಾಯ

### ಅಲಂಕಾರಗಳು

೧. ಬರೆದ ಅಥವಾ ಆಡಿದ ಮಾತಿನ ಅರ್ಥವು ಹೆಚ್ಚಾಗಿ ವಿಶದವಾಗಲು ಇನ್ನೊಂದು ವಿಧವುಂಟು. ಭಾಷಾಪ್ರವೀಣರೆಲ್ಲರೂ ಇದನ್ನು ಅಂಗೀಕಾರಮಾಡಿದಾರೆ. ಅರ್ಥಾಲಂಕಾರವೆಂತಲೂ, ಶಬ್ದಾಲಂಕಾರವೆಂತಲೂ ಎರಡು ಉಂಟು. ಶಬ್ದ ಚಮತ್ಕೃತಿಯಿಂದ ಆಹ್ಲಾದ ಹುಟ್ಟುವಹಾಗೆ ಮಾಡುವುದಕ್ಕೆ ಶಬ್ದಾಲಂಕಾರವೆನ್ನುವರು. ಪ್ರಾಸ, ಯಮಕ, ಮೊದಲಾದ್ದು ಶಬ್ದಾಲಂಕಾರಕ್ಕೆ ಸೇರಿದ್ದು. ಅರ್ಥ ಚಮತ್ಕೃತಿಯಿಂದ ಆಹ್ಲಾದಉಂಟುಮಾಡುವುದು ಅರ್ಥಾಲಂಕಾರ. ಇದರಲ್ಲೆಲ್ಲಾ ಉಪಮಾಲಂಕಾರ ಆದಿ. ಇದರಿಂದ ಅನೇಕವಾಗಿ ಇತರ ಅಲಂಕಾರಗಳು ಹುಟ್ಟುವವು.

(೧) ಉಪಮಾ—ಈ ಅಲಂಕಾರದಲ್ಲಿ ಒಂದು ಪದಾರ್ಥವನ್ನು ಮತ್ತೊಂದು ಪದಾರ್ಥಕ್ಕೆ ಹೋಲಿಸುವರು.

ಉ—"ಮಗುವಿನ ಮುಖವು ಚಂದ್ರನಹಾಗಿದೆ." ಇಲ್ಲಿ ಮುಖವನ್ನು ಚಂದ್ರನಿಗೆ ಹೋಲಿಸಿದಾತೆ. ಮುಖವು ಉಪಮೇಯವೆಂತಲೂ, ಚಂದ್ರ ಉಪಮಾನವೆಂತಲೂ ಹೆಸರು. 'ಹಾಗೆ' ಎನ್ನುವ ಶಬ್ದವು ಇವೆರಡನ್ನೂ ಸೇರಿಸಿ ಹೋಲಿಕೆಯನ್ನು ತೋರಿಸತಕ್ಕದ್ದಾಗಿದೆ. 'ಹಾಗೆ' ಎನ್ನುವುದಕ್ಕೆ ಉಪಮಾ ವಾಚಕವೆಂದು ಹೆಸರು. ಉಪಮಾನ ಉಪಮೇಯಗಳೆರಡಕ್ಕೂ ಸಮಾನವಾಗಿರುವ ಗುಣವು ಸಾಮಾನ್ಯಧರ್ಮ. ಇಲ್ಲಿ ಈ ಧರ್ಮವು ಮುಖ್ಯವಾಗಿ ಎರಡಾಗಿದೆ. ಮುಖವೂ ಚಂದ್ರನೂ ಎರಡೂ ಆಕಾರದಲ್ಲಿ ಗುಂಡು. ನೋಡಿದ ಕೂಡಲೆ ಎರಡೂ ಆನಂದವನ್ನು ಹುಟ್ಟಿಸುವವು. ವರ್ತುಳಾಕಾರ, ಆನಂದಜನಕತ್ವ, ಇವೆರಡೂ ಸಾಮಾನ್ಯ ಧರ್ಮಗಳು.

(೨) ರೂಪಕ--ಉಪಮಾನದಹಾಗೆ ಉಪಮೇಯವಿದೆ ಎನ್ನುವುದಕ್ಕೆ ಬದಲಾಗಿ 'ಹಾಗೆ' ಎಂಬ ಹೋಲಿಕೆ ಶಬ್ದವನ್ನು ಬಿಟ್ಟು ಉಪಮೇಯವೇ ಉಪಮಾನವಾಗಿದೆ ಎಂದು ಹೇಳುತಾರೆ.

ಉ—"ಮಗುವಿನ ಮುಖವು ಚಂದ್ರನಾಗಿದೆ." ಮೇಲೆತೋರಿಸಿರುವ ರೀತಿಯಲ್ಲಿ ಉಪಮಾಲಂಕಾರವನ್ನು ರೂಪಕಾಲಂಕಾರವಾಗಿಯೂ ರೂಪಕಾಲಂಕಾರವನ್ನು ಉಪಮಾಲಂಕಾರವಾಗಿಯೂ ತಿರುಗಿಸಿಕೊಳ್ಳಬಹುದು.

(೩) ಉತ್ಪ್ರೇಕ್ಷಾಲಂಕಾರ—ಒಂದು ವಸ್ತುವಿನಲ್ಲಿ ಇನ್ನೊಂದು ವಸ್ತುವಿನ ಗುಣಗಳನ್ನು ಆರೋಪಿಸಿ ಹೇಳಿದರೆ, ಅದು ಉತ್ಪ್ರೇಕ್ಷಾಲಂಕಾರವೆನಿಸುವುದು.

ಉ—ಚಂದ್ರನ ಕಿರಣಗಳೂ ಸೂರ್ಯನ ಕಿರಣಗಳೂ ನಾನು ಹೆಚ್ಚು ತಾನು ಹೆಚ್ಚೆಂದು ಸೆಣಸಿ ಮಾಡಿದ ಯುದ್ಧದಲ್ಲಿ ಹರಿದ ರಕ್ತಪ್ರವಾಹವು ಆಕಾಶದಲ್ಲಿ ಹರಡಿಕೊಂಡಿದೆಯೋ ಎನ್ನುವಹಾಗೆ ಸಂಜೆಗೆಂಪು ಗಗನದಲ್ಲಿ ಕಾಣಿಸಿತು.

(೪) ಉಲ್ಲೇಖ — ಒಂದು ಪದಾರ್ಥವನ್ನು ಅನೇಕ ವಿಧವಾಗಿ ವರ್ಣಿಸುವುದು ಉಲ್ಲೇಖ.

ಉ—ಪ್ರಾಗ್ದೇವತೆಯ ಮುಖಬಿಂಬದ ಪ್ರಕಾಶವೋ, ಅವಳ ಕಣ್ಣುಗಳ ಥಳಥಳ್ಯದ ಕಾಂತಿಯೋ, ಅವಳ ಹುಸಿನಗೆಯಿಂದ ಕಾಣುವ ದಂತಪಂಗ್ತಿಯ ಕಿರಣಗಳೋ, ಅವಳುಟ್ಟ ಬಿಳೀಉಡುಗೆಯ ಧಾವಳದ್ಯದ ಬೆಳಕೋ ಎನ್ನುವಹಾಗೆ ಬೆಳಕು ಹರೆಯಿತು.

(೫) ವ್ಯತಿರೇಕ—ಉಪಮಾನ ಉಪಮೇಯಗಳನ್ನು ಒಂದಕ್ಕೊಂದು ಹೋಲಿಸುವಾಗ ಉಪಮಾನಕ್ಕಿಂತಲೂ ಉಪಮೇಯವೇ ಉತ್ತಮವೆಂದು ಹೇಳಿದರೆ ವ್ಯತಿರೇಕಾಲಂಕಾರವೆನಿಸುವುದು.

ಉ—೧ ಈ ದೊರೆಯೂ ಕಲ್ಪವೃಕ್ಷವೂ ಗುಣದಲ್ಲಿ ಒಂದೇ: ಆದರೆ ಕಲ್ಪವೃಕ್ಷವು ಅಚೇತನವಾದ್ದು.

(೬) ಆಕ್ಷೇಪಾಲಂಕಾರ--ಸಹಜವಾದ ಗುಣಕ್ಕೆ ಪ್ರತಿಷೇಧ ರೂಪವಾದ ಗುಣವನ್ನು ಕಲ್ಪಿಸಿ ಪ್ರತಿಷೇಧರೂಪವಾದ ಗುಣವನ್ನು ಹೇಳುವುದು ಆಕ್ಷೇಪಾಲಂಕಾರ.

ಉ –೧ ಚಂದ್ರನು ಆ ಮಗುವಿನ ಮುಖದ ಹಾಗಿದ್ದಾನೆ. ಆದರೆ ಚಂದ್ರನಲ್ಲಿ ಕಪ್ಪಿದೆ, ಮುಖದಲ್ಲಿಲ್ಲ.

ಉ—೨. ಬ್ರಹ್ಮನು ವಿದ್ವಾಂಸರಲ್ಲಿ ಬಡತನವನ್ನು ವಿಧಿಸಿದನು. ಆದರೆ ಈ ವಿಧಿಯನ್ನು ತಪ್ಪಿಸುವುದಕ್ಕಾಗಿ ಈ ರಾಜನು ಉದಯಿಸಿದನು.

(೩) ಶ್ಲೇಷಾಲಂಕಾರ—ಒಂದು ಪದವು ಅನೇಕಾರ್ಥವನ್ನು ಕೊಡುತ್ತಿದ್ದರೆ ಅದು ಶ್ಲೇಷಾಲಂಕಾರ.

ಉ—ಹರಿಯಂತೆ ಬಲಯುತಂ ಹರನಂತೆ ರಾಜಶೇ । ಖರ ನಬ್ಜಭವನಂತೆ ಚತುರಾನನಂ.

(೪) ವಿರೋಧಾಭಾಸ — ಒಂದು ಅರ್ಥವು ವಿರೋಧವಾಗಿಯೂ ಇನ್ನೊಂದು ಅರ್ಥವು ಅದನ್ನು ಪರಿಹಾರಮಾಡತಕ್ಕದ್ದಾಗಿಯೂ ಇದ್ದರೆ, ಅದು ವಿರೋಧಾಭಾಸಾಲಂಕಾರ.

ಉ—ಕುವಲಯಾಧಿಪನಾಗಿಯು ಮನಂತರತ್ನನುಂ ಪ್ರಬಲ ತೇಜಸ್ವಿಯಾಗಿಯು ಮಂಧಕಾರಾತಿರುಚಿಯುಂ ಮಹಿತನಯ ಯುಕ್ತನಾಗಿಯು ಮನವಗ್ರಹನು ॥

ಇವೇ ಮೊದಲಾದ ಅರ್ಥಾಲಂಕಾರಗಳು ಅನೇಕಲುಂಟು. ಇದಕ್ಕೆ ಅಲಂಕಾರಶಾಸ್ತ್ರವೇ ಬೇರೇ ಹುಟ್ಟಿದೆ. ಉಳಿದ ಅರ್ಥಾಲಂಕಾರಗಳೆಲ್ಲಾ ಉಪಮಾರೂಪಕ ಈ ಅಲಂಕಾರಗಳ ಪ್ರಭೇದಗಳು.

---

## ೭ನೇ ಭಾಗ.

### ಒಕ್ಕಣೆಯ ವಿಶೇಷ ವಿಧಿಗಳು.

೧. ಬಿಡಿವಾಕ್ಯಗಳನ್ನೂ ಮತ್ತು ಬಿಡಿಕಲಂಗಳನ್ನೂ ಕುರಿತು ಹಿಂದೆ ಬರೆದಿರುವುದರಲ್ಲಿ ಒಕ್ಕಣೆಯು ಲಕ್ಷಣಗಳನ್ನು ಸ್ವಲ್ಪ ಮಟ್ಟಿಗೆ ಬರೆದಿದೆ. ಅನೇಕ ಕಲಂಗಳನ್ನುಳ್ಳ ಒಟ್ಟು ಬರವಣಿಗೆಯನ್ನು ಕುರಿತು

ವಿಶೇಷವಾದ ಕೆಲವು ಸಂಗತಿಗಳನ್ನು ಇಲ್ಲಿ ಹೇಳ ಬೇಕಾಗಿದೆ.

(1) ಏಕವಿಷಯತ್ವ.

೨. ಒಂದು ಕಲಂನಲ್ಲಿ ವಾಕ್ಯಗಳು ಒಂದ ಕ್ಕೊಂದು ಹೇಗೆ ಅರ್ಥದಲ್ಲಿ ಸರಪಣಿಯಂತೆ ಸೇರಿ ಕೊಂಡಿರಬೇಕೋ ಹಾಗೆಯೇ ಒಂದು ಕಲವೂ ಇನ್ನೊಂದು ಕಲವೂ ಸೇರಿಕೊಂಡಿರಬೇಕು. ಒಂದು ಸಂಗತಿಯನ್ನು ಹೇಳುವಾಗ ಸಂಬಂಧವಿಲ್ಲದ ಇತರ ಸಂಗತಿಗಳನ್ನು ತರತಕ್ಕದ್ದು ಏಕವಿಷಯತ್ವಕ್ಕೆ ಲೋಪವನ್ನುಂಟುಮಾಡುವುದು. ವಾಕ್ಯವನ್ನಾಗಲಿ ಕಲವನ್ನಾಗಲಿ ವಿಶೇಷ ದೊಡ್ಡದಾಗಿಯೂ ಉದ್ದ ವಾಗಿಯೂ ಬರೆದರೆ, ಈ ಗುಣ ಕೆಡುವುದಕ್ಕೆ ಮಾರ್ಗ ವಾಗುವುದು. ಬರವಣಿಗೆಯಲ್ಲಿ ಏಕವಿಷಯತ್ವ ವಿಚಾ ರವು ಬಹಳ ಅಗತ್ಯವಾದ್ದು. ಇದೇ ಕೆಟ್ಟರೆ ಇತರ ಗುಣಗಳೂ ಕೆಡುವವು.

(2) ಸ್ಪಷ್ಟತ್ವ.

ಸೌಲಭ್ಯ ಕೆಡುವ ವಿಚಾರವನ್ನು ಕುರಿತು ಹಿಂದೆ ಬೇಕಾದಷ್ಟು ವಿವರಿಸಿದೆ. ದ್ವಂದ್ವಾರ್ಥ ಮೊದಲಾದ ದೋಷಗಳನ್ನು ತ್ಯಜಿಸಿದರೆ ಸ್ಪಷ್ಟತ್ವ ಹೆಚ್ಚುವುದು.

(3) ಪೌರುಷ ಶೈಲಿ ಅಥವಾ ಬಂಧುರತ್ವ.

೪. (೧) ವಾಕ್ಯದ ಭಾಗಗಳು ಬಿಡಿಬಿಡಿಯಾಗಿ ಲ್ಲದೆ ಜೋಡಣೆಯಲ್ಲಿ ಬಿಗಿಯಾಗಿರಬೇಕಾದ ಸಂಗತಿ ಹಿಂದೆ ಕಂಡಿದೆ.

(೨) ವಾಕ್ಯದಲ್ಲಿ ಮುಖ್ಯವಾದ ಶಬ್ದವನ್ನು ಮೊದಲು ಬರೆಯಬೇಕು.

(೨) ಸಾಧಾರಣ ವಾಕ್ಯವನ್ನು ಪ್ರಶ್ನೆಯಾಗಿ ಬರೆಯುವುದು.—

ಉ—ಭೀಮನು ಗದೆಯಿಂದ ಒಂದೇಟನ್ನು ಕೌರವನಿಗೆ ಹೊಡೆದ. ಆಗ ಕೌರವನ ಗತಿ ಏನಾಯಿತು?

(೩) ಸಾಧಾರಣ ವಾಕ್ಯವನ್ನು ಅರ್ಥಕ್ಕೆ ಅನುಸಾರವಾಗಿ ಮೆಚ್ಚಿಗೆ ಅಥವಾ ಆಶ್ಚರ್ಯರೂಪವಾಗಿ ಬರೆಯುವುದು.

ಉ—ಓ ಲಕ್ಷ್ಮಣಾ ಎಂದು ಮಾರೀಚ ಕೂಗಿಕೊಂಡು ಬಿದ್ದ. ಅದರಿಂದ ಆದ ವಿಪರೀತವನ್ನು ಏನೆಂದು ಹೇಳಲಿ!

(೪) ಒಂದಕ್ಕೊಂದು ವಿಪರೀತಾರ್ಥವನ್ನು ಕೊಡುವ ಶಬ್ದಗಳು ಅಥವಾ ವಾಕ್ಯಭಾಗಗಳು ವಾಕ್ಯದಲ್ಲಿ ಮುಖ್ಯವಾಗಿ ಢಾಕ್ಕಾದಸ್ಥಾನವನ್ನು ಹೊಂದಿರಬೇಕು.

ಉ—1. ನಮ್ಮ ಪ್ರಯತ್ನದಲ್ಲಿ ಆರುಭಾಗ ನಮ್ಮದು, ಏಳನೇ ಭಾಗ ದೇವರದು.

2. ಅಡಿಯಮುಂದಿಡೆ ಸ್ವರ್ಗವಡಿಯ ಹಿಂದಿಡೆ ನರಕ।
ಅಡಿಗಶ್ವಮೇಧಫಲ ಸ್ವಾಮಿಕಾರ್ಯಕೆ । ಮಡಿಯಲೇಬೇಕು, ಸರ್ವಜ್ಞ ॥

(೬) ಸಂದರ್ಭದಿಂದ ಸ್ಪಷ್ಟವಾಗಿರುವ ಶಬ್ದವನ್ನು ಬರೆಯದೇ ಬಿಟ್ಟುಬಿಡುವುದು.

ಉ—ಬೆಕ್ಕಿಗೇನೋ ಚಕ್ಕಂದ; ಆದರೆ ಇಲಿಗೆ?

(4) ಶ್ರಾವ್ಯತ್ವ.

(೧) ವಾಕ್ಯದ ಶಬ್ದಗಳನ್ನು ಜೋಡಿಸಿ ಬರೆಯುವಾಗ ಆ ಜೋಡಣೆಯು ಕಿವಿಗೆ ಇಂಪಾಗಿರಬೇಕು. ಕರ್ಣಕಠೋರವಾಗಿರಬಾರದು.

ಉ—ಹರಿಯು ಬಳಿಸ ನಡುವೆ ಸೀತೆ ಪೊಳೆಯೆಚಳ ವಿಲೋ
ಚನಂ । ಕರಿಯಬಿಳಿಯು ಮುಗಿಲನಡುವೆ ಪೊಳೆವ
ಮಿಂಚಿನಂದದಿಂ ॥

(೨) ಕಾವ್ಯಲಕ್ಷಣಕ್ಕೆ ಛಂದಶ್ಶಾಸ್ತ್ರ ಬೇರೇ ಹುಟ್ಟಿದೆ. ಬೇಕಾದವರು ಅದನ್ನು ಓದಿಕೊಳ್ಳಬಹುದು.

---

## ೮ ನೇ ಭಾಗ

## ೧ ನೇ ಅಧ್ಯಾಯ.

### ಯೋಗರೂಢಗಳು.

೧. ಪದಗಳ ಅರ್ಥವು (1) ರೂಢ, (2) ಯೋಗ, (3) ಯೋಗರೂಢ, ಎಂದು ಮೂರು ವಿಧವಾಗಿದೆ.

(1) ಬಳಕೆಯಲ್ಲಿರುವ ಶಬ್ದವನ್ನು ರೂಢವೆನ್ನುವರು.

ಉ—ಕೈ, ಕಾಲು, ತಲೆ, ಹಸು, ಮನೆ, ಮರ, ಮೊದಲಾದವು.

(2) ಮೂಲಧಾತುಗಳ ಅರ್ಥದಿಂದ ಹುಟ್ಟಿದ ಪದವನ್ನು ಯೋಗವೆನ್ನುವರು.

ಉ—ಹಲ್ಲುಜೀರ, ಮರಕುಟಿಗ, ಹಣಗಾರ, ವಾನಿಷ್ಠ.

(3) ಅವಯವಾರ್ಥವನ್ನೂ ರೂಢಿಯಾದ ಅರ್ಥವನ್ನೂ ಒಟ್ಟಿಗೆ ಸೇರಿಸಿ ಪ್ರಯೋಗಿಸುವ ಪದಕ್ಕೆ ಯೋಗರೂಢವೆಂದು ಹೆಸರು.

ಉ—ಭಾಸ್ಕರ.

ವಿಚಾರ— ಇದಕ್ಕೆ ಪ್ರಕಾಶವನ್ನು ಉಂಟುಮಾಡುವವನೆಂದು ಅವಯವಾರ್ಥವಿದೆ. ಹೀಗೆ ಸೂರ್ಯ,

ಚಂದ್ರ, ಗ್ರಹಗಳು, ನಕ್ಷತ್ರಗಳು, ಬೆಂಕಿ, ದೀಪ, ಇವುಗಳೆಲ್ಲಾ ಪ್ರಕಾಶವನ್ನು ಉಂಟುಮಾಡುವವು. ಆದಾಗ್ಯೂ 'ಭಾಸ್ಕರ' ಎಂಬ ಶಬ್ದವು ಸೂರ್ಯನಿಗೆ ಮಾತ್ರ ಒಂದು ಹೆಸರಾಗಿ ರೂಢವಾಗಿದೆ.

೨. ಎಲ್ಲಾ ಭಾಷೆಯಲ್ಲಿಯೂ ಕೆಲವು ಶಬ್ದಗಳು ಸೇರಿದ ನುಡಿಗಳಿಗೆ ಅಥವಾ ಶಬ್ದ ಸಮೂಹಕ್ಕೆ ಯೋಗಾರ್ಥ ಬಂದಿದ್ದಾಗ್ಯೂ, ರೂಢಾರ್ಥ ಪ್ರತ್ಯೇಕವಾಗಿರುವುದುಂಟು. ಇವುಗಳು ಪ್ರಾಚೀನ ಪ್ರಯೋಗಗಳಾಗಿವೆ. ಇವುಗಳ ಅರ್ಥವನ್ನು ಚೆನ್ನಾಗಿ ತಿಳಿದು ಎಲ್ಲರೂ ಪ್ರಯೋಗಿಸುವುದು ಕಷ್ಟ. ಹೆಂಗಸರೂ ಸಾಧಾರಣ ಜನರೂ ಇಂಥವುಗಳನ್ನು ರೂಢಿಯಾಗಿ ಪ್ರಯೋಗಿಸುವುದು ಹೆಚ್ಚು. ಇಂಥಾ ನುಡಿಗಳಿಗೆ ಅರ್ಥವನ್ನು ಚೆನ್ನಾಗಿ ತಿಳಿದುಕೊಳ್ಳದೆ ಪ್ರಯೋಗಿಸಿದರೆ ರಸಾಭಾಸವಾಗುವುದು. ಬಳ್ಳೀ ತಿರುಳ ಗನ್ನಡವೆಂದು ಇವುಗಳಿಗೆ ಹೇಳಬಹುದು. ಇಂಥಾ ಪ್ರಯೋಗಗಳು ಕೇವಲ ಗ್ರಾಮ್ಯವೆಂದು ಅನ್ಯಭಾಷಾ ಪ್ರವೀಣರು ಪರಿಭಾವಿಸುವರು. ಭಾಷೆಯು ಪೂರ್ತಿಯಾಗಿ ಸ್ವಾಧೀನವಾಗಿದ್ದವರಿಗೆ ಮಾತ್ರ ಈ ಪ್ರಯೋಗ ಸಾಧ್ಯವಾಗುವುದು.

೩. ಎರಡು ಶಬ್ದಗಳನ್ನು ದ್ವಂದ್ವವಾಗಿ ಯಾವಾಗಲೂ ಒಟ್ಟಿಗೆ ಸೇರಿಸಿ ಪ್ರಯೋಗಿಸುವುದುಂಟು. ಇವುಗಳಲ್ಲಿ ಎರಡುವಿಧ.

(೧)—ಅಂಥಾ ಎರಡು ಶಬ್ದಗಳೂ ಒಂದೇ ಅರ್ಥವನ್ನು ಕೊಡತಕ್ಕದ್ದು.

ಉ—ಅನ್ನ ಆಹಾರ.

ಅನ್ನಕ್ಕೂ ಆಹಾರಕ್ಕೂ ಸ್ವಲ್ಪ ಅರ್ಥಭೇದವನ್ನು ಕಲ್ಪಿಸಬೇಕು. ಆದರೆ ಒಟ್ಟಿನಲ್ಲಿ ಎರಡರ ಅರ್ಥವೂ ಒಂದೇ ಆಗುವುದು.

ಉ—ಗಟ್ಟಿ ಬೆಟ್ಟಿ; ನೀರು ನಿಡಿ; ಗೆಡ್ಡೆ ಗೆಣಸು; ಹಣ್ಣು ಹಂಪಲು; ಕುರುಕುಳ್ಳ; ಹುಳು ಹುಪಟೆ; ಸೊಪ್ಪುಸೆದೆ; ಮರ ಮುಂಡಿ; ಹೆಜ್ಜೇಮೇಲೆಹೆಜ್ಜೆ; ಮಾತು ಮಾತಿಗೆ: ಮುಂತಾದವುಗಳು.

(೨) ಎರಡು ಶಬ್ದಗಳೂ ಬೇರೇಬೇರೇ ಅರ್ಥವನ್ನು ಕೊಡುವುದಕ್ಕೆ—

ಗದ್ದೆ ಗರಜಿ—ಗದ್ದೆ=ನೀರಹರಿಸಿ ಬೆಳೆಯುವ ಪ್ರದೇಶ; ಗರಜಿ=ಮಣ್ಣು ಅಥವಾ ಹುಲ್ಲು ಅಥವಾ ಬಿದರು ಇವೇ ಮುಂತಾದವುಗಳಲ್ಲಿ ಗುಂಡಾಗಿಯೂ ಎತ್ತರವಾಗಿಯೂ ಕಟ್ಟಿ ಒಳಗೆ ಟೊಳ್ಳುಮಾಡಿ ಧಾನ್ಯ ಕೆಡದಂತೆ ಅವರೊಳಗೆ ಹಾಕುವ ಗೆರಸಿ ಎಂದು ಅರ್ಥ.

ತೋಟ ತುಡಿಕೆ—ತೋಟ = ಗಿಡಗಳನ್ನೂ ಮರಗಳನ್ನೂ ಹಾಕಿರತಕ್ಕ ಪ್ರದೇಶ. ತುಡಿಕೆ= ತೋಟದಲ್ಲಿ ಆದ ಬೆಳೆಯನ್ನು ತಂದು ಇರಿಸಲುತೋಟದಲ್ಲಿ ಕಟ್ಟಿರುವ ಮನೆ.

ದಂಡುದಾಳಿ—ದಂಡು=ಆನೆ ಕುದುರೆ ಒಂಟೆ ಕಾಲು ಬಲ; ದಾಳಿ=ಸೇನೆಯುವರು ಉಪಯೋಗಿಸುವ ಬಾವಟ.

ಗೊಬ್ಬರ ಗೋಡು-ಗೊಬ್ಬರವೆಂಬುವುದನ್ನು ಎಲ್ಲರೂ ಬಲ್ಲರು. ಗೋಡು = ಕೆರೆ ಅಥವಾ ಹಳ್ಳ ಇವುಗಳ ಅಂಗಳಕ್ಕೆ ಮಳೆಯಲ್ಲಿ ಕೊಚ್ಚಿಕೊಂಡು ಬಂದು ನಿಂತಿರುವ ಎಕ್ಕಲ ಮಣ್ಣು.

ಕಾಗದ ಪತ್ರ—ಕಾಗದ = ಬರವಣಿಗೆಯ ಸಲಕರಣೆ. ಪತ್ರ = ಬಂದೇ ಸಮನಾಗಿ ಹರಿದ ಹಾಳೆ ಅಥವಾ ವಿಶೇಷವಾದ ವಾಗ್ದಾನಗಳನ್ನುಳ್ಳ ಸಾಧನ

ಕಚ್ಚಡಿ ಪಚ್ಚಡಿ—ಕಚ್ಚಡಿ = ಚಟ್ಟಣಿ; ಪಚ್ಚಡಿ = ಮುರುಕು ಮುರುಕಾಗಿ ಕುಯಿದು ಮೊಸರು ಅಥವಾ ಹುಳಿ, ಉಪ್ಪು, ಒಗ್ಗರಣೆ ಇವುಗಳನ್ನು ಹಾಕಿದ ಕೋಸುಂಬರಿ.

ಹಾಡುಹಸೆ-ಹಾಡು = ರಾಗವಾಗಿ ಹೇಳುವ ಪದಗಳು. ಹಸೆ = ರಂಗವಲ್ಲಿ ಯಲ್ಲಿ ನೆಲದಮೇಲೂ ಚಾಂದ್ರದಲ್ಲಿ ಗೋಡೆಯ ಮೇಲೂ ಹೆಂಗಸರು ನಾಜೋಕಾಗಿ ಬರೆಯುವ ಚಿತ್ರ.

ಗಂದಗಾಳಿ—"ಅವನ ಗಂದಗಾಳಿಗೆ ಹೋಗುವುದು" ಎಂಬ ಕಡೆ ಗವಲು ಅಥವಾ ಗಂದ = ವಾಸನೆ; ಗಾಳಿ = ಅವನಮೇಲೆ ಬೀಸುವ ಗಾಳಿ ಅಥವಾ ಉಸಿರು.

ಹೀಗೆಯೇ ಅನೇಕವಾಗಿವೆ.

೪. ಪುರಾಣ ಪ್ರಸಿದ್ಧವಾದ ಕೆಲವು ಸಂಗತಿಗಳು ಮತ್ತು ಪಾತ್ರಗಳು ಬಂದೊಂದು ಸಂದರ್ಭದಲ್ಲಿ ಬಂದೊಂದು ಅರ್ಥವನ್ನು ಹೊಂದಿ ರೂಢಿಗೆ ಬಂದಿವೆ.

ಉ—ಈ ಮನುಷ್ಯ ಯಮನಾಗಿದಾನೆ; ಈ ಜಡಭರತನಿಂದ ಏನು ಕೆಲಸವೂ ಆಗಲಾರದು; ಈ ಸೈಂಧವನಾದರೆ ಆ ತೊಲೇ ಮುಟ್ಟಿಯಾನು; ಕೃಷ್ಣ ಪಂಡಿತರು ಧನ್ವಂತರಿ; ರಾವಣಸನ್ಯಾಸಿ; ಅವನು ಮಾರೀಚ; ಕೃಷ್ಣ ಸಂಧಿ ನಡೆಯುತಾ ಇದೆ; ಅಶ್ವತ್ಥಾಮ ಕಟ್ಟೇಕಟ್ಟಿ ದಾಗ್ಯ ಮಹಾಭಾರತ ಮುಗಿಯಿತು; ಈ ಕಾಲನೇಮಿ ಯನ್ನು ನಂಬುವುದು ಹೇಗೆ; ನಳಪಾಕ; ಇವೇ ಮುಂತಾದ್ದು.

೫. ಕೆಲವು ಚರಿತ್ರ ಪುರುಷರ ಹೆಸರನ್ನು ಹೀಗೆ ಪ್ರಯೋಗಿಸುವುದುಂಟು.

ಉ—ಇದು ನವಾಬನ ದರಬಾರಾಯಿತು; ತೆನ್ನಾಲರಾಮ ಕೃಷ್ಣನಹಾಗೆ ಮಾತನಾಡುತಾನೆ; ಎಲ್ಲಾ ಅಡಳಿತವು ಮೊಗಲಾಯಿ ಆಗಿದೆ; ಈ ಚಾಣಕ್ಯತಂತ್ರ ನಮಗೆ ತಿಳಿಯದು; ಮನೇ ವೆಚ್ಚವೆಲ್ಲಾ ಶಿವಪ್ಪನಾಯಕನ ಸಿಸ್ತಾಗಿದೆ; ತೆರದಬಾಗಿಲಿಗೆ ೩ ಹಣ ವಸೂಲ ಮಾಡಿದರು.

೬. ಜೀವಜಂತುಗಳ ಹೆಸರಿನಲ್ಲಿ ಕೆಲವು ಪ್ರಯೋಗಗಳುಂಟು.

ಉ—ಕಾಸು ಕುದುರೇ ಕೊಂಬಾಗಿದೆ; ಕತ್ತೇಭಾರ; ಬಕನ ತಪಸ್ಸು ಮಾಡುತಾನೆ; ಇದ್ದದೆಲ್ಲಾ ನಾಯಿಪಾಲು ನರೀಪಾಲು; ಅವನ ಸ್ವತ್ತು ಕಾಕಭೋಜನವಾಯಿತು; ಆಡಾಗಳ ಸ್ತನವಾಗಿದಾರೆ; ಆಡಿದರೆ ಅರಗಿಣಿ ಕಾಡಿ ದರೆ ನಾಗರಕಾಟ; ಬೆಕ್ಕೇತಿಂದ ಬೆಕ್ಕಾಗಿ ಕೂತಿದಾನೆ; ಹಾಸಿಗೆ ಹಾವಾಯಿತು; ಏಳುಮನೇ ಚೇಲಿಯಾಗಿ ಓಡಿಯಾಡುತಾನೆ.

೭. ಇತರ ಚಿಲ್ಲರೇ ಪ್ರಾಚೀನ ಪ್ರಯೋಗಗಳು.

ಉ—ಅಟ್ಟಕ್ಕೂ ಬೆಟ್ಟಕ್ಕೂ ಗಂಟ ಹಾಕುತಾನೆ;

ಕಡ್ಡಿ ಚಿಟಕ್ಕನ್ನಲಿಲ್ಲ; ಹಿಟ್ಟಿನಮಡಕೆ ತಾಳಾ ಹೊಡೆಯುತ್ತೆ; ಕಂಡಗಹಾಲಿಗೆ ಒಂದು ತೊಟ್ಟು ಹೆಪ್ಪು; ಇವೇ ಮಂತಾದ್ದು

೮. ಸಂಸ್ಕೃತದಿಂದ ನಮ್ಮ ಭಾಷೆಗೆ ಬಂದಿರುವ ನ್ಯಾಯಗಳೆಂಬ ಕೆಲವು ಪ್ರಯೋಗಗಳುಂಟು.

ಉ — ದೇಹಳೀದೀಪನ್ಯಾಯ = ಅಡ್ಡಗೋಡೇ ಮೇಲಿನ ದೀಪ.

ಹಸ್ತಿಮಶಕನ್ಯಾಯ = ಆನೆಗೂ ಸೊಳ್ಳೆಗೂ ಸಾಮ್ಯ.

ಅಜಗಜನ್ಯಾಯ = ಆನೆ ಎಲ್ಲಿ ಆಡೆಲ್ಲಿ ?

ಘುಣಾಕ್ಷರನ್ಯಾಯ, ಸೂಚೀಕಟಾಹನ್ಯಾಯ,

ತಪ್ತಾಯುನ್ಯಾಯ, ಸ್ಥಾಲೀಪುಲಾಕನ್ಯಾಯ,

ಹೀಗೆಯೇ ಅನೇಕವಾಗಿ ಉಂಟು.

೯. "ಕಣೊ, ಕಣೆ" ಇವುಗಳ ಪ್ರಯೋಗವು ಕನ್ನಡದಲ್ಲಿ ಸ್ವಲ್ಪ ವಿಶೇಷವಾದ್ದು. ಈ ಉಪಸರ್ಗವು ಅವಧಾರಣಾರ್ಥದಲ್ಲಿ ಪ್ರಯೋಗವಾಗುವುದು. ಕ್ರಿಯೆಯ ಕೊನೆಯಲ್ಲಿಯೇ ಬರುವುದು.

ಉ—ಅವಬರೆದಕಣೊ; ಆ ಕೆಲಸ ನೆರವೇರಿತು ಕಣೊ; ಇವೇ ಮುಂತಾದ್ದು.

ವಿಚಾರ—ಕ್ರಿಯೆಯು ಪ್ರಶ್ನಾರ್ಥಕವಾಗಿದ್ದರೆ, ಅದರ ಕೊನೆಯಲ್ಲಿ ಇದನ್ನು ಪ್ರಯೋಗಿಸಕೂಡದು.

ಉ — 'ಆ ಕೆಲಸವನ್ನು ಯಾರು ಮಾಡಿದರುಕಣೊ?' ಇದು ತಪ್ಪು.

ತಮಿಳರು ಇದನ್ನು ಸರ್ವನಾಮದ ಕೊನೆಯಲ್ಲಿ ಪ್ರಯೋಗಿಸುವರು.

ಉ — "ಏನುಕಣೊ, ಯಾರುಕಣೊ." ಇದು ಕನ್ನಡದಲ್ಲಿ ತಪ್ಪು.

ಆಂಧ್ರರು ಕನ್ನಡವನ್ನು ಬರೆಯುವಾಗ ಮಾತ ನಾಡುವಾಗ ಸಹಾ 'ಕಣೋ' ಎನ್ನುವುದಕ್ಕೆ ಬದಲಾಗಿ 'ಟಿ' ಎಂಬ ಪ್ರತ್ಯಯವನ್ನು ಉಪಯೋಗಿಸುವರು.

ಉ—ಇಲ್ಲವೊ; ಅವಬಂದನೊ.

ಇದು ಕನ್ನಡ ಪ್ರಯೋಗವಲ್ಲ.

೧೦. ಗಾಥೆಗಳು ಇಂಥಾ ಪ್ರಾಚೀನಪ್ರಯೋಗವಾದ ನಾಣ್ಣುಡಿಗಳಲ್ಲಿ ತಿರುಳಾಗಿವೆ. ಇವುಗಳನ್ನು ಪ್ರೀತಿಯಾಗಿಯಾಗಲಿ ಸ್ವಲ್ಪವಾಗಿಯಾಗಲಿ ಸಂದರ್ಭವನ್ನರಿತು ಪ್ರಯೋಗಿಸಿದರೆ ಬರವಣಿಗೆ ಬಹುಚೆನ್ನಾಗಿ ಅರ್ಥಗರ್ಭಿತವಾಗಿರುವುದು. ಕನ್ನಡದಲ್ಲಿ ಅಂಥಾ ಬರವಣಿಗೆಯನ್ನು ಬರೆಯುತಕ್ಕವರು ಅಪೂರ್ವ.

## ೯ ನೇ ಭಾಗ.

## ೧ ನೇ ಅಧ್ಯಾಯ.

### ರಸ ಪ್ರಕರಣ.

ನಾವು ಆಡುವ ಮಾತಿನಿಂದಲೂ ಬರೆಯುವ ಬರವಣಿಗೆಯಿಂದಲೂ ಜನರಿಗೆ ಸುಖದುಃಖ ಸಂತಾಪಾದಿ ಮನೋಭಾವಗಳೂ ವಿಕಾರಗಳೂ ಹುಟ್ಟುವವು. ಈ ವಿಧವಾದ ಮನೋಧರ್ಮಕ್ಕೆ ಲಾಕ್ಷಣಿಕರು ರಸವೆಂದು ಹೆಸರಿಟ್ಟಿದಾರೆ. ಈ ರಸಗಳು ೯ ಇವೆ ಎಂದು ಕೆಲವರು ಹೇಳುತಾರೆ. ಭೇದಿಸಿ ನೋಡಿದರೆ ಇದು ಹೆಚ್ಚಾಗಿ ಕಾಣುವುದು.

೧. ಶೃಂಗಾರ ರಸ-ಸ್ತ್ರೀಪುರುಷರಿಗೆ ಪರಸ್ಪರ ಇರುವ ಪ್ರೇಮದ ಸೂಚನೆಯಿಂದ ಹುಟ್ಟುವ ಮನೋಭಾವ. ದಮಯಂತೀ ಪರಿಣಯ, ಸುಭದ್ರಾ ಪರಿಣಯ, ಮೊದಲಾದ ಕಥೆಗಳಲ್ಲಿ ಈ ರಸ ವಿಶೇಷವಾಗಿದೆ.

೨. ವೀರರಸ—ನಮ್ಮ ಶತ್ರುವಿನಿಂದಾದ ಅಪಚಾರಕ್ಕೆ ನಮ್ಮ ಮನಸ್ಸಿನಲ್ಲಿ ಹುಟ್ಟುವ ಅಂತರ್ಭಾವ. ಕೋಪ, ಮಾತ್ಸರ್ಯ, ದ್ವೇಷ, ಕ್ರೋಧ, ಈ ಮನೋಭಾವಗಳು ವೀರರಸದಲ್ಲಿ ಸೇರಿ ಕೊಂಡಿವೆ ಎಂದು ಲಾಕ್ಷಣಿಕರು ಹೇಳು ತಾರೆ.

(1) ಉತ್ಸಾಹ—ತನಗೆ ಉಂಟಾಗಬಹುದೆಂದು ತೋ ರುವ ಕಷ್ಟವನ್ನೂ ಕ್ಲೇಶವನ್ನೂ ಮನಸ್ಸಿ ಗೆತಾರದೆ ಆತ್ಮನಿಗ್ರಹದಿಂದ ಪರೋಪಕಾರ ಕ್ಕಾಗಿ ಕೆಲಸಮಾಡುವ ಮನೋಭಾವ. ಇದರಲ್ಲಿ ನಾಲ್ಕು ಭೇದ ಉಂಟು.

1. ದಾನವೀರ—ಉ—ಕರ್ಣ, ಬಲಿಚಕ್ರವರ್ತಿ, ಮಯೂರಧ್ವಜ.
2. ಯುದ್ಧವೀರ - ಉ-ಶ್ರೀರಾಮ, ಅಭಿಮನ್ಯು.
3. ಧರ್ಮವೀರ—ಉ—ಯುಧಿಷ್ಠಿರ.
4. ದಯಾವೀರ— ಉ—ಶಿಬಿಚಕ್ರವರ್ತಿ, ಜೀಮೂತವಾಹನ.

೩. ಕರುಣ ಅಥವಾ ಶೋಕ ರಸ. | ಇಷ್ಟಜನಾದಿ ವಿಯೋಗದಿಂದ ಹುಟ್ಟುವ ಮನೋಭಾವ.

೪. ಅದ್ಭುತ ರಸ, ವಿಸ್ಮಯ, | ಯಾವಾಗಲೂ ನೋಡದೆ ಕೇಳದೆ ಇರುವ ಸಂಗತಿಯಿಂದ ಹುಟ್ಟುವ ಮನೋಭಾವ.

೫. ಹಾಸ್ಯರಸ—ಸ್ವಭಾವಕ್ಕೆ ವ್ಯತ್ಯಸ್ತವಾದ ಅನುಭವದಿಂದ ಹುಟ್ಟುವ ಮನೋವಿಕಾರ.

